CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜನವರಿ ೮, ೨೦೦೪ (ಪುಷ್ಯ ೧೮, ಶಕ ವರ್ಷ ೧೯೨೫) | ಸಂಚಿಕೆ ೨ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ ವಿಭಾಗ, ದಾವಣಗೆರೆ

### ಮರು ಟೆಂಡರ್-ಕಂ-ಹರಾಜು ಪ್ರಕಟಣೆ

**ನಂ.ಬಿ2:ಎಂಎಫ್‌ಪಿ:ಟೆಂಡರ್:ಸಿಆರ್ 9/2003-04, ದಿನಾಂಕ: 18ನೇ ಡಿಸೆಂಬರ್, 2003**

**ವಿಷಯ:** 2003-2005ನೇ ಸಾಲಿಗೆ ಕಿರು ಅರಣ್ಯ ಉತ್ಪನ್ನಗಳ ಮರು ಟೆಂಡರ್-ಕಂ-ಹರಾಜು ಕುರಿತು.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ದಾವಣಗೆರೆ ಅರಣ್ಯ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಅರಣ್ಯ ಪ್ರದೇಶದಲ್ಲಿ ಕಿರು ಅರಣ್ಯ ಉತ್ಪನ್ನಗಳನ್ನು 2003-05ನೇ ಸಾಲಿಗೆ ಸಂಗ್ರಹಿಸಿ, ಸಾಗಾಣಿಕೆ ಮಾಡಲು ದಿನಾಂಕ: 19.01.2004 ರಂದು ಈ ಕಛೇರಿಯಲ್ಲಿ ಅಪರಾಹ್ನ 4.30 ಗಂಟೆಗೆ ಕೆಳಸಹಿದಾರರು ಅಥವಾ ಅವರಿಂದ ಅಧಿಕೃತವಾಗಿ ನೇಮಕಗೊಂಡಿರುವ ಅಧಿಕಾರಿಗಳು ಮರು ಟೆಂಡರ್-ಕಂ-ಹರಾಜು ಮಾಡಲಿರುವರು 2003-04ನೇ ಸಾಲಿಗೆ ಈ ವಿಭಾಗದಲ್ಲಿ ನೊಂದಾಯಿತ ಅರಣ್ಯ ಗುತ್ತಿಗೆದಾರರು ಭಾಗವಹಿಸಬಹುದಾಗಿದೆ.

| ಕ್ರ. ಸಂ. | ಯುನಿಟ್ ಸಂಖ್ಯೆ | ವಲಯ | ಅರಣ್ಯ ಉತ್ಪನ್ನ ಹಾಗೂ ಪ್ರದೇಶದ ವಿವರ | ಕಾಲಾವಧಿ | ಮುಂಗಡ ಸಂಹಿತ ಠೇವಣಿ (ಇಎಂಡಿ) |
|---|---|---|---|---|---|
| 1 | 2 | 3 | 4 | 5 | 6 |
| | | | **ಹುಣಸೇ ಫಸಲು** | | |
| 1. | 1 | ದಾವಣಗೆರೆ | ಹುಳಿಯೂರು-ದಾವಣಗೆರೆ ರಸ್ತೆ ಬದಿ 98 ಕಿ.ಮೀ. ರಿಂದ 115 ಕಿ.ಮೀ. | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| 2. | 6 | ದಾವಣಗೆರೆ | ಹೊಸಪೇಟೆ-ಹರಿಹರ ಮಂಗಳೂರು ರಸ್ತೆ 103 ಕಿ.ಮೀ ರಿಂದ 129 ಕಿ.ಮೀ | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| 3. | 7 | ದಾವಣಗೆರೆ | ಹೊಸಪೇಟೆ-ಹರಿಹರ ಮಂಗಳೂರು ರಸ್ತೆ 129 ಕಿಮೀ ರಿಂದ 139 ಕಿಮೀ | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| 4. | 8 | ಹರಪನಹಳ್ಳಿ | ರಾಷ್ಟ್ರೀಯ ಹೆದ್ದಾರಿ ರಾಜ್ಯ ಹಾಗೂ ಜಿಲ್ಲಾ ರಸ್ತೆ | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| 5. | 9 | ಹೊನ್ನಾಳಿ | ರಾಷ್ಟ್ರೀಯ ಹೆದ್ದಾರಿ ರಾಜ್ಯ ಹಾಗೂ ಜಿಲ್ಲಾ ರಸ್ತೆ (ಹೊನ್ನಾಳಿ ಸವಳಂಗ ರಸ್ತೆ 14 ಕಿ.ಮೀ. ರಿಂದ 16 ಕಿ.ಮೀ ರವರೆಗೆ ಸಾಲಬಾಳು (ಗ್ರಾಮ ಅರಣ್ಯ ಸಮಿತಿಗೆ ಕಾಯ್ದಿರಿಸಿದೆ.) | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |

| 1 | 2 | 3 | 4 | 5 | 6 |
|---|---|---|---|---|---|
| 6. | 23 | ಹೊನ್ನಾಳಿ | ಹೊನ್ನಾಳಿ ವಲಯದ ಅರಣ್ಯ ಪ್ರದೇಶ ವ್ಯಾಪ್ತಿಯಲ್ಲಿ | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| 7. | 18 | ಜಗಳೂರು | ಜಗಳೂರು ವಲಯದ ಅರಣ್ಯ ಪ್ರದೇಶದಲ್ಲಿ (ಗ್ರಾಮ ಅರಣ್ಯ ಸಮಿತಿ ವ್ಯಾಪ್ತಿಬಿಟ್ಟು) | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| | | | **ತುಪ್ರಾ ಎಲೆ** | | |
| 8. | 21 | ದಾವಣಗೆರೆ | ಹರಿಹರ ತಾ. ಮತ್ತು ಹೊನ್ನಾಳಿ ತಾ. ಕೆಲಭಾಗ ಸೇರಿ | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| 9. | 14 | ಹರಪನಹಳ್ಳಿ | ತೊಗರೀಕಟ್ಟೆ ಮತ್ತು ಜಾಜಿಕಲ್ ಗುಡ್ಡ ಮನ್ನಜಂಗಲಿ ಮತ್ತು ಸಂಬಂಧಿಸಿದ ಹಳ್ಳಿಗಳು ಸೇರಿ | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| 10. | 15 | ಹರಪನಹಳ್ಳಿ | ಹುಚ್ಚಂಗಿದುರ್ಗ, ನೀಲಗುಂದ, ಅಲಗಿಲವಾಡ (ಮೀಸಲು ಅರಣ್ಯ) ಹರಪನಹಳ್ಳಿ, ಅರಸೀಕೆರೆ ಮತ್ತು ತೆಲಗಿ ಪಿರ್ಕಾ ಕಾಯ್ದಿಟ್ಟ ಅರಣ್ಯ ಪ್ರದೇಶ (ಗ್ರಾಮ ಅರಣ್ಯ ಸಮಿತಿ ಮತ್ತು ಜಾಜಿಕಲ್‌ಗುಡ್ಡ ಮನ್ನಜಂಗಲಿ ಬಿಟ್ಟು) | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| | | | **ತಂಗಡಿ, ಕಕ್ಕೆ, ಬಾರ್ಕ್** | | |
| 11. | 20 | ದಾವಣಗೆರೆ, ಜಗಳೂರು | ದಾವಣಗೆರೆ ವಲಯ ಹಾಗೂ ಜಗಳೂರು ವಲಯದ ಅರಣ್ಯ ಪ್ರದೇಶಗಳು ಸೇರಿ (ವಲಯ ಅರಣ್ಯಾಧಿಕಾರಿಗಳು ತೋರಿಸಿದ ಭಾಗಗಳು) | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| | | | **ಎಂಎಫ್‌ಪಿ** | | |
| 12. | 16 | ಹರಪನಹಳ್ಳಿ | ಹುಚ್ಚಂಗಿದುರ್ಗ, ನೀಲಗುಂದ, ಅಲಗಿಲವಾಡ (ಮೀಸಲು ಅರಣ್ಯ) ಹರಪನಹಳ್ಳಿ, ಅರಸೀಕೆರೆ ಮತ್ತು ತೆಲಗಿ ಪಿರ್ಕಾ (ಜಿತ್ತಿನಕಟ್ಟೆ ಮೀಸಲು ಅರಣ್ಯ ಗ್ರಾಮ ಅರಣ್ಯ ಸಮಿತಿ ಪ್ರದೇಶ ಹೊರತು ಪಡಿಸಿ) | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| 13. | 17 | ಹರಪನಹಳ್ಳಿ | ತೊಗರಿಕಟ್ಟೆ ಮತ್ತು ಜಾಜಿಕಲ್ ಗುಡ್ಡ ಮನ್ನಜಂಗಲಿ ಮತ್ತು ಸಂಬಂಧಿಸಿದ ಹಳ್ಳಿಗಳು ಸೇರಿ | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |
| 14. | 19 | ದಾವಣಗೆರೆ | ದಾವಣಗೆರೆ ತಾ: ಹಾಗೂ ಹರಿಹರ ತಾ: ಅರಣ್ಯ ಪ್ರದೇಶ ಮತ್ತು ಹೊನ್ನಾಳಿ ತಾ: ಕೆಲವು ಭಾಗಗಳು | 2003-05 ದಿನಾಂಕ:30.06.2005 ಅಂತ್ಯಕ್ಕೆ (2 ವರ್ಷ ಅವಧಿಗೆ) | 2000-00 |

## ನಿಬಂಧನೆಗಳು

1. ಟೆಂಡರ್ ಫಾರಂನ್ನು ರೂ. 200-00 ಮತ್ತು ತೆರಿಗೆಗಳನ್ನು ಪಾವತಿ ಮಾಡಿ ಹರಾಜಿನ ದಿನ ಮಧ್ಯಾಹ್ನ 1-00 ಗಂಟೆಯ ಒಳಗಾಗಿ ಈ ಕಛೇರಿಯಲ್ಲಿ ಪಡೆಯಬಹುದಾಗಿದೆ.
2. ಹರಾಜಿನಲ್ಲಿ ಭಾಗವಹಿಸುವವರು ಇಎಂಡಿ ಮೊತ್ತವನ್ನು ಡಿ.ಡಿ. ಮುಖಾಂತರ ಹರಾಜು ಕೂಗುವುದಕ್ಕೆ ಮೊದಲು ಈ ಕಛೇರಿಗೆ ಜಮಾ ಮಾಡಬೇಕು. ಟೆಂಡರ್ ಜೊತೆಯಲ್ಲಿ ಇಎಂಡಿ ಇಲ್ಲದಿದ್ದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.
3. ಈ ವಿಭಾಗದಲ್ಲಿ 2003-2004ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರು ಮಾತ್ರ ಈ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
4. ಸರ್ಕಾರಕ್ಕೆ ಬಾಕಿ ಕಟ್ಟದೇ ಇರುವ ಗುತ್ತಿಗೆದಾರರು ಈ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಇದಕ್ಕೆ ತಪ್ಪಿ ಭಾಗವಹಿಸಿದಲ್ಲಿ ಅವರ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

5. ಜಯಶೀಲರಾದ ಗುತ್ತಿಗೆದಾರರು ಸದರಿ ಹರಾಜಿನ ಗುತ್ತಿಗೆಗೆ ಸಂಬಂಧಿಸಿದಂತೆ ಮೊಬಲಗಿನ ಅರ್ಧ ಭಾಗ ಹಣ ಮತ್ತು ಚಾಲ್ತಿಯಲ್ಲಿರುವ ಪೂರ್ಣ ತೆರಿಗೆಗಳನ್ನು ಹರಾಜಿನ ದಿವಸವೇ ಜಮಾ ಮಾಡತಕ್ಕದ್ದು. ಉಳಿದ ಅರ್ಧ ಭಾಗ ಹಣವನ್ನು ಗುತ್ತಿಗೆ ಕರಾರು ಒಪ್ಪಂದ ಮಾಡಿಕೊಳ್ಳುವ ಮೊದಲು ಪಾವತಿಸತಕ್ಕದ್ದು.
6. ಟೆಂಡರ್ ಫಾರಂನ್ನು ನಿಗದಿತ ಇಎಂಡಿ ಯೊಂದಿಗೆ ಮೊಹರ್ ಮಾಡಿದ ಲಕೋಟೆಯಲ್ಲಿ 4.00 ಗಂಟೆಯೊಳಗಾಗಿ ಈ ಕಛೇರಿಯಲ್ಲಿನ ಟೆಂಡರ್ ಪೆಟ್ಟಿಗೆಯಲ್ಲಿ ಹಾಕುವುದು. ಸಂಬಂಧಿಸಿದಂತೆ ಹೆಚ್ಚಿನ ವಿವರಗಳನ್ನು ಈ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.

**ಬಿ. ಗೋಪಾಲನಾಯ್ಕ**
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್.828

**ಭದ್ರಾವತಿ ಅರಣ್ಯ ವಿಭಾಗ**

**ಅಲ್ಪ ಕಾಲಾವಧಿ ಸಂಕ್ಷಿಪ್ತ ಮರು ಟೆಂಡರ್ ಕಂ ಹರಾಜು ಪ್ರಕಟಣೆ**

**ಸಂಖ್ಯೆ:ಎಸ್ಎಎಸ್-ಎಂಎಫ್‌ಪಿ-ಸಿಆರ್-2/2003-2004, ದಿನಾಂಕ:18ನೇ ಡಿಸೆಂಬರ್, 2003**

**ವಿಷಯ:** 2003-2004ನೇ ಸಾಲಿಗೆ ಕಿರು ಅರಣ್ಯ ಉತ್ಪನ್ನಗಳ ಟೆಂಡರ್-ಕಂ-ಹರಾಜು.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಭದ್ರಾವತಿ ಅರಣ್ಯ ವಿಭಾಗಕ್ಕೆ ಸೇರಿದ ಸರ್ಕಾರಿ ಅರಣ್ಯಗಳು, ಕಾಯ್ದಿಟ್ಟ ಅರಣ್ಯಗಳು, ಕಿರು ಅರಣ್ಯಗಳು, ಹಾಗೂ ಅನುಭೋಗದಲ್ಲಿರುವ ಸರ್ಕಾರದ ಜಮೀನುಗಳಲ್ಲಿನ (ಪಂಚಾಯತ್ ಮತ್ತು ಅಮೃತ ಮಹಲ್ ಕಾವಲ್‌ಗಳನ್ನು ಹೊರತುಪಡಿಸಿ) ಹುಣಸೇ ಫಸಲನ್ನು ದಿನಾಂಕ:03.01.2004 ರಂದು ಈ ಕಛೇರಿ ಆವರಣದಲ್ಲಿ ಸಾಯಂಕಾಲ 4 ಗಂಟೆಗೆ ಕೆಳಸಹಿದಾರರು ಅಥವಾ ಅವರಿಂದ ಅಧಿಕೃತವಾಗಿ ನೇಮಕಗೊಂಡಿರುವ ಅಧಿಕಾರಿಗಳು ಟೆಂಡರ್-ಕಂ-ಹರಾಜು ಮಾಡಲಿರುವರು.

| ಯೂನಿಟ್ ಸಂಖ್ಯೆ | ಅರಣ್ಯ ಉತ್ಪನ್ನದ ವಿವರ | ವಲಯ | ಕಾಲಾವಧಿ | ಮುಂಗಡ ಸಂಚಿತ ಠೇವಣಿ (ರೂ.) |
|---|---|---|---|---|
| 1 | 2 | 3 | 4 | 5 |
| 10. | ಹುಣಸೇ ಫಸಲು (ಭದ್ರಾವತಿ ವಲಯದ ಅರಣ್ಯ ಇಲಾಖೆಗೆ ಸೇರಿದ ರಾಜ್ಯ ಹೆದ್ದಾರಿ ಬದಿಯ ಹುಣಸೇ ಮರಗಳು ಬಿ.ಹೆಚ್. ರಸ್ತೆ 45.8 ಕಿ.ಮೀ. ಕಲ್ಲಿನಿಂದ 268.6 ಕಿ.ಮೀ. ವರೆಗೆ ಮತ್ತು ಚಿತ್ರದುರ್ಗ-ಭದ್ರಾವತಿ ರಸ್ತೆಯ 76ನೇ ಕಿ.ಮೀ. ಕಲ್ಲಿನಿಂದ 96ನೇ ಕಿ.ಮೀ. ಕಲ್ಲಿನವರೆಗೆ ಸುಮಾರು 141 ಮರಗಳು) | ಭದ್ರಾವತಿ | 2003-2004 (ಒಂದು ವರ್ಷದ ಅವಧಿಗೆ) 30.06.2004ರ ತನಕ | 2000-00 |
| 12 | ಹುಣಸೇ ಮರಗಳು (ತರೀಕೆರೆ ವಲಯ ತರೀಕೆರೆ ಕ್ಕೆ ಒಳಪಟ್ಟ ರಾಷ್ಟ್ರೀಯ ಹೆದ್ದಾರಿ ಬದಿಯಲ್ಲಿರುವ ಹುಣಸೇ ಮರಗಳು ಬಿ.ಹೆಚ್. ರಸ್ತೆಯ 220 ಕಿ.ಮೀ ಕಲ್ಲಿನಿಂದ 246 ಕಿ.ಮೀ. ಕಲ್ಲಿನವರೆಗೆ ಮತ್ತು ರಸ್ತೆಯ ಚಿಕ್ಕಮಗಳೂರು ತರೀಕೆರೆ ರಸ್ತೆಯ 46.6 ಕಿ.ಮೀ ಕಲ್ಲಿನಿಂದ 48.6 ಕಿ.ಮೀ. ಕಲ್ಲಿನವರೆಗೆ ಸುಮಾರು 112 ಮರಗಳು) | ತರೀಕೆರೆ | 2003-2004 (ಒಂದು ವರ್ಷದ ಅವಧಿಗೆ) 30.06.2004ರ ತನಕ | 2000-00 |
| 13 | ಹುಣಸೇ ಫಸಲು (ಅಜ್ಜಂಪುರ ವಲಯಕ್ಕೆ ಅಜ್ಜಂಪುರ ಒಳಪಟ್ಟ ರಾಜ್ಯ ಹೆದ್ದಾರಿಯಲ್ಲಿರುವ ಸುಮಾರು 286 ಮರಗಳು) | ಅಜ್ಜಂಪುರ | 2003-2004 (ಒಂದು ವರ್ಷದ ಅವಧಿಗೆ) 30.06.2004ರ ತನಕ | 2000-00 |

**ನಿಬಂಧನೆಗಳು**

1. ಟೆಂಡರ್ ಫಾರಂನ್ನು ರೂ. 10-00 ಮತ್ತು ತೆರಿಗೆಗಳನ್ನು ಪಾವತಿ ಮಾಡಿ ಹರಾಜಿನ ದಿನ ಮಧ್ಯಾಹ್ನ 1-00 ಗಂಟೆಯ ಒಳಗಾಗಿ ಈ ಕಛೇರಿಯಲ್ಲಿ ಪಡೆಯಬಹುದಾಗಿದೆ.
2. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವವರು ಇಎಂಡಿ ಹಣವನ್ನು ಡಿ.ಡಿ. ಮುಖಾಂತರವಾಗಿ ಯಾಗಲೀ ನಗದು ರೂಪದಲ್ಲಿಯಾಗಲೀ ಹರಾಜು ಕೂಗುವುದಕ್ಕೆ ಮೊದಲು ಈ ಕಛೇರಿಗೆ ಜಮಾ ಮಾಡಬೇಕು. ಟೆಂಡರ್ ಜೊತೆ ಇಎಂಡಿ/ ಬ್ಯಾಂಕ್ ಹುಂಡಿ ಇಲ್ಲದಿದ್ದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.
3. ಈ ವಿಭಾಗದಲ್ಲಿ 2003-2004ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರು ಮಾತ್ರ ಈ ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
4. ಸರ್ಕಾರಕ್ಕೆ ಬಾಕಿ ಕಟ್ಟದೇ ಇರುವ ಗುತ್ತಿಗೆದಾರರು ಮತ್ತು ಕಪ್ಪು ಪಟ್ಟಿಯಲ್ಲಿ ಘೋಷಿತ ಅರಣ್ಯ ಗುತ್ತಿಗೆದಾರರು ಈ ಟೆಂಡರ್ ಮತ್ತು ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಇದಕ್ಕೆ ತಪ್ಪಿ ಭಾಗವಹಿಸಿದಲ್ಲಿ ಅವರ ಠೇವಣಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

5. ಟೆಂಡರ್ ಕಂ ಹರಾಜಿನ ಗುತ್ತಿಗೆಗೆ ಸಂಬಂಧಿಸಿದಂತೆ ಬಿಡ್ ಮೊಬಲಗನ್ನು ಟೆಂಡರ್ ಕಂ ಹರಾಜು ಮುಗಿದ ನಂತರ ಆ ದಿನವೇ ಜಯಶೀಲರಾದ ಟೆಂಡರ್ ದಾರಿಯ ಬಿಡ್ ದಾರರು ಅರ್ಧ ಭಾಗ ಬಿಡ್ ಟೆಂಡರ್ ಹಣ ಮತ್ತು ಚಾಲ್ತಿಯಲ್ಲಿರುವ ಪೂರ್ಣ ತೆರಿಗೆಗಳನ್ನು ಹರಾಜು ಮುಗಿದ ಕೂಡಲೇ ಜಮಾ ಮಾಡತಕ್ಕದ್ದು.

6. ಇತರೆ ಹೆಚ್ಚಿನ ವಿವರಗಳಿಗಾಗಿ ಈ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್.829 ಭದ್ರಾವತಿ ಅರಣ್ಯ ವಿಭಾಗ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ**

**ಸಹಾಯಕ ನಿರ್ದೇಶಕರ ಕಛೇರಿ, ಲಸಿಕೆ ಸಂಸ್ಥೆ, ಬೆಳಗಾವಿ-6**

**ನಂ.ಲಸಂಬೆ:ಲೆಪವಿ(1)22:2003-04, ಬೆಳಗಾವಿ, ದಿನಾಂಕ:28ನೇ ನವಂಬರ್, 2003**

2004-2005ನೇ ವರ್ಷದಲ್ಲಿ ಈ ಮುಂದೆ ಕಾಣಿಸಲಾದ ಪಟ್ಟಿಯಲ್ಲಿ ಸೂಚಿಸಿರುವ ವಿವರಣೆಗಳಿಗೆ ಪ್ರತ್ಯೇಕವಾದ ಮೊಹರಾದ ಟೆಂಡರುಗಳನ್ನು ದ್ವಿ ಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ತಾರೀಖು ಮತ್ತು ವೇಳೆಯಲ್ಲಿ ಸಹಾಯಕ ನಿರ್ದೇಶಕರು, ಲಸಿಕೆ ಸಂಸ್ಥೆ, ಬೆಳಗಾವಿ-590006 ಇವರು ಸ್ವೀಕರಿಸುತ್ತಾರೆ.

| ಕ್ರ. ಸಂ. | ಟೆಂಡರುಗಳ ವಿವರಗಳು | ಅಂದಾಜು (ಪ್ರಮಾಣ ಸಂಖ್ಯೆಗಳು) | ಟೆಂಡರು ಸ್ವೀಕರಿಸಲು ನಿಗದಿಪಡಿಸಲ್ಪಟ್ಟ ಕೊನೆಯ ದಿನಾಂಕ ಮತ್ತು ವೇಳೆ. | 2 ಟೆಂಡರ್ ಫಾರಂಗಳ ಸೆಟ್ ಒಂದರ ಬೆಲೆ. ರೂ. | ಅಂದಾಜು ಟೆಂಡರು ವೆಚ್ಚ |
|---|---|---|---|---|---|
| 1 | 2 | 3 | 4 | 5 | 6 |
| 1. | ಖರೀದಿ ನಿಯಮಾನುಸಾರ ಗಂಡು ಅಥವಾ ಹೆಣ್ಣು ಕುರಿಮರಿಗಳನ್ನು ಲಸಿಕೆ ಸಂಸ್ಥೆ, ಟಿಳಕವಾಡಿ, ಬೆಳಗಾವಿ ಇಲ್ಲಿಗೆ ಸರಬರಾಜು ಮಾಡುವುದು ಕುರಿಮರಿಗಳ ವಯಸ್ಸು 8 ತಿಂಗಳ ಒಳಗಿರಬೇಕು ಮತ್ತು 8 ರಿಂದ 12 ಕಿಗ್ರಾಂ ತೂಕ ಇರಬೇಕು. | 1500 ರಿಂದ 2000 ಕುರಿಮರಿಗಳನ್ನು ಸರಬರಾಜು ಮಾಡುವುದು | 09.03.2004 ರಂದು ಬೆಳಿಗ್ಗೆ 11.30 ಗಂಟೆಗೆ | 190.00+ಅಂಚೆವೆಚ್ಚ ಪ್ರತ್ಯೇಕ | 15 ಲಕ್ಷ |
| 2. | ಸತ್ತ ಕುರಿಗಳ ಚರ್ಮಗಳನ್ನು ತೆಗೆಯುವುದು ಮತ್ತು ಖರೀದಿಸುವುದು. | 1500 ರಿಂದ 2000 ಕುರಿಮರಿ ಚರ್ಮಗಳನ್ನು | 09.03.2004 ರಂದು ಬೆಳಿಗ್ಗೆ 11.30 ಗಂಟೆಗೆ | 20.00+ಅಂಚೆವೆಚ್ಚ ಪ್ರತ್ಯೇಕ | 40,000 |

ಮೇಲೆ ತಿಳಿಸಿದ ಪ್ರತಿಯೊಂದು ಟೆಂಡರುಗಳ ನಿರ್ಬಂಧನೆಗಳು ಮತ್ತು ಷರತ್ತುಗಳಿಗೆ ಸಂಬಂಧಿಸಿದಂತೆ ವಿವರಗಳು ಟೆಂಡರು ಫಾರಂಗಳಲ್ಲಿ ದೊರೆಯುತ್ತದೆ.

ಇಚ್ಛೆಯುಳ್ಳ ಟೆಂಡರುದಾರರು, ಸಹಾಯಕ ನಿರ್ದೇಶಕರು, ಲಸಿಕೆ ಸಂಸ್ಥೆ, ಟಿಳಕವಾಡಿ ಬೆಳಗಾವಿ-590006 ಇವರಿಗೆ ಅರ್ಜಿ ಕಳುಹಿಸಿ ಅವಶ್ಯಕವಾದ ಟೆಂಡರು ಫಾರಂಗಳನ್ನು ಪಡೆಯಬಹುದು. ಒಂದು ಜೊತೆ ಟೆಂಡರು ಫಾರಂ ನಮೂನೆಗೆ ನಿಗದಿಪಡಿಸಿರುವ ಹಣವನ್ನು ನಗದು ಅಥವಾ ಮನಿಆರ್ಡರ್ ಮೂಲಕ ಇಲ್ಲವೆ ಸಹಾಯಕ ನಿರ್ದೇಶಕರ ಪರವಾಗಿ ಪಡೆದ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು, ಟೆಂಡರು ಫಾರಂಗಳನ್ನು ನಿಗದಿಪಡಿಸಿದ ತಾರೀಖಿನ ದಿವಸ ಅಂದರೆ ದಿನಾಂಕ:07.03.2004ರ ಬೆಳಿಗ್ಗೆ 11 ಗಂಟೆಯ ಒಳಗೆ ಮಾತ್ರ ಮಾರಾಟ ಮಾಡಲಾಗುತ್ತದೆ.

ಟೆಂಡರು ಈ ಕಛೇರಿಯಿಂದ ಪಡೆದ ಟೆಂಡರು ನಮೂನೆಯಲ್ಲಿರಬೇಕು, ಬೇರೆ ತರಹದ ಟೆಂಡರುಗಳನ್ನು ಸ್ವೀಕರಿಸಲಾಗುವುದಿಲ್ಲ.

ಟೆಂಡರು ತೆರೆಯುವ ದಿನಾಂಕ ಅಕಸ್ಮಾತ್ತಾಗಿ ಸಾರ್ವಜನಿಕ ರಜೆಯಾಗಿದ್ದರೆ ಅದೇ ವೇಳೆಗೆ ಸರಿಯಾಗಿ ಮರುದಿನ ತೆಗೆಯಲಾಗುವುದು.

ಇಚ್ಛೆಯುಳ್ಳ ಟೆಂಡರುದಾರರು ಟೆಂಡರು ಫಾರಂಗಳನ್ನು ಮೊದಲೇ ಪಡೆದುಕೊಳ್ಳಬೇಕು ಮತ್ತು ಟೆಂಡರುಗಳನ್ನು ಸಲ್ಲಿಸಲು ನಿಗದಿಮಾಡಿದ ತಾರೀಖು ಮತ್ತು ವೇಳೆಗೆ ಸರಿಯಾಗಿ ಇಲ್ಲವೇ ಅದಕ್ಕೆ ಮೊದಲು ಟೆಂಡರುಗಳನ್ನು ಕಳಿಸಬೇಕು.

ಸಹಾಯಕ ನಿರ್ದೇಶಕರು,

ಪಿ.ಡಿ.97 ಲಸಿಕೆ ಸಂಸ್ಥೆ, ಬೆಳಗಾವಿ.

**FORM-IV**

**(See Rule 12)**

**NOTICE**

It is hereby notified that the undersigned has changed his/her name from **AKKAMAHA DEVAMMA HANUMANTAPPA MARCHAPPANAVAR to JAYASHREE CHANDRASHEKAR GOUDAR**

PD-168

**KARNATAKA FOREST DEPARTMENT**
**OFFICE OF THE DEPUTY CONSERVATOR OF FORESTS, CHITRADURGA DIVISION, CHITRADURGA**
**PUBLIC AUCTION NOTIFICATION**

It is hereby notified for the general information of the public that the trees standing in the corridor of impact from Km 0 to 30.00 Km of Hiriyur-Bellary State Highway will be publicly auction on 21.01.2004 at M.D. Mahadeva nursery of Molakalmuru range, Chitradurga District.

For the purpose of the auction sale Hangal circle which falls in the jurisdiction of Molakalmuru taluk is taken as 0 Km. It is proposed to auction trees standing in the corridor of impact from Km 0 to Km 30 i.e., from Hangal circle to Tammenahalli, upto the border of Chitradurga district.

The auction will be conducted either by the undersigned or by any other officer duly authorized by him to conduct sale on his behalf. Auction will be held as per the conditions detailed below & at the place & time as shown in the Schedule.

If no bidders participated in the sale on 21.01.2004, 1st re auction sale will be held on 29.01.2004, the 2 re-auction sale will be held on 05.02.2004. No separate notification will be issued again for these 2 re-auction sales.

**SCHEDULE**

| Name of the road | Unit no. | Km | No. of trees | Estimated quantity | | Place & Date of auction |
|---|---|---|---|---|---|---|
| | | | | Timber (CM3) | Firewood (Tonnes) | |
| 1 | 2 | 3 | 4 | 5 | 6 | 7 |
| Hiriyur-Bellary State Highway Hangal cross to Tammenahally upto District border | 1 | 0-1 | 55 | 38.06 | 59.9 | Auction sale will be held on 21.01.2004 at M.D. Mahadeva nursery of Molakalmuru range at 3-30 PM |
| | 2 | 1-2 | 48 | 29.56 | 47.5 | |
| | 3 | 2-3 | 54 | 15.52 | 57.7 | |
| | 4 | 3-4 | 31 | 7.79 | 41.75 | |
| | 5 | 4-5 | 17 | 7.87 | 18.00 | |
| | 6 | 5-6 | 26 | 24.29 | 25.20 | |
| | 7 | 6-7 | 18 | 29.50 | 15.50 | |
| | 8 | 7-8 | 22 | - | 22.45 | |
| | 9 | 8-9 | 18 | 17.46 | 14.60 | |
| | 10 | 9-10 | 31 | 12.23 | 41.00 | |
| | 11 | 10-11 | 19 | - | 26.40 | |
| | 12 | 11-13 | 17 | 0.46 | 16.15 | |
| | 13 | 13-14 | 39 | 45.02 | 44.70 | |
| | 14 | 14-15 | 67 | 24.84 | 59.75 | |
| | 15 | 15-16 | 50 | 0.81 | 36.95 | |
| | 16 | 16-17 | 37 | 3.72 | 21.70 | |
| | 17 | 17-18 | 2 | 1.69 | 0.60 | |
| | 18 | 18-19 | 28 | 30.46 | 18.30 | |
| | 19 | 19-20 | 27 | 65.66 | 32.70 | |
| | 20 | 20-21 | 21 | 4.19 | 10.35 | |
| | 21 | 21-22 | 21 | 11.36 | 25.10 | |
| | 22 | 22-23 | 62 | 37.67 | 39.55 | |
| | 23 | 23-24 | 47 | 43.91 | 36.04 | |
| | 24 | 24-25 | 52 | 25.69 | 50.95 | |
| | 25 | 25-26 | 68 | 34.27 | 48.90 | |
| | 26 | 26-27 | 21 | 15.78 | 24.90 | |
| | 27 | 27-28 | 33 | 30.11 | 60.90 | |
| | 28 | 28-29 | 70 | 77.71 | 63.15 | |
| | 29 | 29-30 | 8 | 4.40 | 8.20 | |
| | Total | | 1009 | 640.03 | 968.89 | |

**CONDITIONS:**

1. Intending bidders shall deposit on amount of Rs. 5000/-as E.M.D.
2. Bidders shall sign the detailed notification before taking part in the auction sale, otherwise bidders will not be allowed to participate in the sale. Socieities and Institutions can also take part in the auction sale.
3. EMD amount will be returned to the unsuccessful bidders on the same day.
4. Quantity of timber/ firewood may vary. The quantity shown in the schedule is approximate. Complaints regarding this will not be entertained.
5. The successful Bidders shall remit 50% of sale value plus applicable full taxes on the same day of the auction sale. If the successful bidder fail to remit the amount, EMD amount deposit will be forfeited and re-auction will be held at the risk & cost of the successful bidder who shall make good any loss arising therefrom as an arrear of land revenue or any other law & who shall not have any claim for the surplus that the Government may gain by such a resale.
6. The bidder shall remit 50% of the balance sale amount before executing the agreement and getting the work order.
7. Income tax will be collected as per section-216C.
8. Successful bidders shall make his own arrangement for cutting & transportation of trees as per the existing rules & regulations at his own cost and risk.
9. Bidders shall inspect the list of trees given in the unitwise No. of trees before the start of auction sale. Complaints of any kind regarding the No. of trees, quantitiy & quality of timber etc., will not be entertained after the sale.
10. Persons who are black listed, declared as bankrupt, convicted or minors are not eligible for participation in the auction sale.
11. Successful bidder shall arrange for the cutting & transportation of trees within one month from the date of confirmation of the sale.
12. If any litigations arises in respect of auction sale, the Deputy Conservator of Forests, Chitradurga has the right to decide the matter.
13. The Department is not responsible for any loss incurred by the successful bidder, due to illicit cutting, fire or any natural calamities and if bidder fails to cut & transport the trees within one month from the date of confirmation of sale.
14. The bidder shall take care not to cause any damage or hindrance to public property, telephone & electricity supply poles, vehicular traffic. The bidder will be responsible for any damages caused.
15. Bidders who attend the auction sale late due to unavoidable circumstances can participate in the auction sale on the permission of sale conducting officer after depositing the EMD amount.
16. The sale conducting officer is at liberty to add any supplementary condition that may be found necessary and to modify any of the above conditions and read out at the time of auctions sale.
17. Bidders shall abide by the rules & regulations of the Government.

Deputy Conservator of Forests,
Chitradurga Division,
Chitradurga.

PR-833

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಪಿ.ಒ. ಬಾಕ್ಸ್:7648, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂ:ತೋಇ:ಜೀವತಾ: ಹಿಸತೋನಿ (ಅಂಕೃ):ಸತೋಅ1:64:2003-04, ದಿನಾಂಕ: 22ನೇ ಡಿಸೆಂಬರ್, 2003**

ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ಇಲ್ಲಿನ ವಿವಿಧ ಪ್ರಯೋಗಶಾಲೆಗಳಿಗೆ ಸಂಬಂಧಪಟ್ಟಂತೆ ವಿವಿಧ ಯಂತ್ರೋಪಕರಣಗಳಾದ ಅಟಾಮಿಕ್ ಅಬ್ಸಾರ್ಷನ್ ಸ್ಪೆಕ್ಟ್ರೋಫೋಟೋಮೀಟರ್, ಹಾರಿಜಾಂಟಲ್ ಸ್ಟೀಂ ಸ್ಟರಿಲೈಜರ್, ಬಾಯ್ಲರ್, ಹವಾ ನಿಯಂತ್ರಣ ವ್ಯವಸ್ಥೆಗಳು, ಜನರೇಟರ್, ನೀರಿನ ಶುದ್ಧೀಕರಣ ವ್ಯವಸ್ಥೆ, ಗ್ರೋತ್ ರೂಮಿನ ವಿದ್ಯುದೀಕರಣ ವ್ಯವಸ್ಥೆ, ಗೆರ್‌ಡಾರ್ಟ್ ಡೈಜೆಷನ್ ಅಂಡ್ ಡಿಸ್ಟಿಲ್ಲೇಷನ್ ಯೂನಿಟ್, ಲ್ಯಾಮಿನಾರ್ ಏರ್ ಫ್ಲೋ ಛೇಂಬರ್ (6 ಅಡಿ) ಇತ್ಯಾದಿಗಳ ವಾರ್ಷಿಕ ನಿರ್ವಹಣೆಗಾಗಿ ವಿವಿಧ ಅಧಿಕೃತ ಸರ್ವೀಸಿಂಗ್ ಸಂಸ್ಥೆಗಳಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಸದರಿ ಯಂತ್ರೋಪಕರಣಗಳ ವಾರ್ಷಿಕ ನಿರ್ವಹಣೆಗಾಗಿ ತಗಲುವ ವೆಚ್ಚವನ್ನು ಕನಿಷ್ಠ ದರದಲ್ಲಿ ಪ್ರತ್ಯೇಕವಾಗಿ ನಮೂದಿಸಬೇಕು. ಟೆಂಡರ್ ಫಾರಂಗಳು, ನಿಬಂಧನೆಗಳು ಮತ್ತು ಇತರೆ ಮಾಹಿತಿಗಳನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ದಿನಾಂಕ: 12.01.2004 ರಿಂದ 20.01.2004ರ ಒಳಗೆ ಪಡೆಯಬಹುದು.

ಟೆಂಡರ್ ಫಾರಂನ ಮೊತ್ತ ರೂ. 25/-. ಮೊಹರಾದ ಟೆಂಡರುಗಳ ಮೇಲೆ ನಿಗದಿತ ಯಂತ್ರೋಪಕರಣದ ವಾರ್ಷಿಕ ನಿರ್ವಹಣೆಗಾಗಿ ಟೆಂಡರು ಎಂದು ಪ್ರತ್ಯೇಕವಾಗಿ ನಮೂದಿಸಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರಿಗೆ ದಿನಾಂಕ:22.01.2004ರ 2.00 ಘಂಟೆಯ ಒಳಗೆ ಅಂಚೆ ಅಥವಾ ಮುದ್ದಾಂ ಕಳುಹಿಸುವುದು. ಟೆಂಡರುಗಳನ್ನು ಅದೇ ದಿನ ಸಂಜೆ 4.00 ಘಂಟೆಗೆ ತೆರೆಯಲಾಗುವುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
ಅಂಗಾಂಶ ಕೃಷಿ.

**ಟೆಂಡರ್ ನಿಯಮಾವಳಿಗಳು**

1. ಟೆಂಡರ್ ಫಾರಂ ಬೆಲೆ 25/- ಮಾತ್ರ. ಟೆಂಡರ್ ಫಾರಂನ್ನು ಈ ಕಛೇರಿಯಲ್ಲಿ ಹಣ ನೀಡಿ ಪಡೆಯಬಹುದು. ಟೆಂಡರ್ ಫಾರಂ ಹಣ ಹಿಂತಿರುಗಿಸಲಾಗುವುದಿಲ್ಲ.
2. ಟೆಂಡರ್ ಫಾರಂನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು. ವಿ.ಪಿ.ಪಿ. ಮುಖಾಂತರ ಕಳುಹಿಸಿಕೊಡಲಾಗುವುದಿಲ್ಲ.
3. ಟೆಂಡರ್ ಫಾರಂ ದಿನಾಂಕ:12.01.2004 ರಿಂದ 02.01.2004ರ ಸಂಜೆ 5.00ರ ವರೆಗೆ ಮಾತ್ರ ನೀಡಲಾಗುವುದು. ಮೊಹರು ಮಾಡಿದ ಟೆಂಡರನ್ನು ವಾಪಸ್ಸು ನೀಡಲು ಅಂತಿಮ ದಿನಾಂಕ:22.01.2004 ಮಧ್ಯಾಹ್ನ 2.00 ಗಂಟೆಯವರೆಗೆ ಮಾತ್ರ.
4. ಟೆಂಡರನ್ನು ದಿನಾಂಕ:22.01.2004ರಂದು ಸಂಜೆ 4.00 ಘಂಟೆಗೆ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು ಇಲ್ಲಿ ತೆರೆಯಲಾಗುವುದು.
5. ಸದರಿ ಟೆಂಡರಿನಲ್ಲಿ ಪ್ರಕಟಿಸಿರುವ ವಿವಿಧ ಯಂತ್ರೋಪಕರಣಗಳ ವಾರ್ಷಿಕ ನಿರ್ವಹಣೆ ಬಗ್ಗೆ ತಾಂತ್ರಿಕ ವಿವರಣೆಗಳನ್ನು ಹಾಗೂ ನಿರ್ವಹಣಾ ನಿಬಂಧನೆಗಳ ಪೂರ್ಣ ವಿವರಣೆಗಳನ್ನು ಸದರಿ ಕಛೇರಿಯಲ್ಲಿ ಪಡೆಯಬಹುದು.
6. ಟೆಂಡರಿನಲ್ಲಿ ಭಾಗವಹಿಸುವವರು ಪ್ರತಿಯೊಂದು ಯಂತ್ರೋಪಕರಣಗಳಿಗೂ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸಬೇಕು.
7. ಟೆಂಡರಿನಲ್ಲಿ ಭಾಗವಹಿಸುವವರು ಸದರಿ ಯಂತ್ರೋಪಕರಣಗಳನ್ನು (ನಿಗದಿತ ಮಾದರಿ) ಸರ್ವೀಸಿಂಗ್ ಹಾಗೂ ವಾರ್ಷಿಕ ನಿರ್ವಹಣೆ ಮಾಡಿರುವ ಬಗ್ಗೆ ಅನುಭವ ಹೊಂದಿರಬೇಕು. ಈ ಬಗ್ಗೆ ಸದರಿ ಯಂತ್ರೋಪಕರಣಗಳನ್ನು ಅಳವಡಿಸಿರುವ ಸಂಸ್ಥೆಗಳಿಂದ ದೃಢೀಕರಣ ಹೊಂದಿರಬೇಕು.
8. ತೆರಿಗೆ ಮತ್ತು ಅಬ್ಕಾರಿ ಶುಲ್ಕವನ್ನು ಸ್ಪಷ್ಟವಾಗಿ ನಮೂದಿಸುವುದು. ವಿಮೆ ಎಲ್ಲವನ್ನು ಸೇರಿಸಿ ಐಟಂವಾರು ತಗಲುವ ಕನಿಷ್ಠ ದರವನ್ನು ಪ್ರತ್ಯೇಕವಾಗಿ ನಮೂದಿಸುವುದು.
9. ಟೆಂಡರುದಾರರು ಯಂತ್ರೋಪಕರಣಗಳ ವಾರ್ಷಿಕ ನಿರ್ವಹಣೆಗಾಗಿ ನಮೂದಿಸುವ ಒಟ್ಟು ಮೊತ್ತದ ಶೇ.2 ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಹುಂಡಿಯ ಮುಖಾಂತರ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬೆಂಗಳೂರು ರವರ ಹೆಸರಿನಲ್ಲಿ ಟೆಂಡರ್ ಅರ್ಜಿಯೊಂದಿಗೆ ಸಲ್ಲಿಸಬೇಕು.
10. ಟೆಂಡರ್ ಅನುಮೋದಿತ ಸಂಸ್ಥೆಯು ಶೇ. 5 ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಸದರಿ ಅಧಿಕಾರಿಯವರ ಹೆಸರಿನಲ್ಲಿ ಖರೀದಿ ಆದೇಶ ನೀಡುವ ಮುನ್ನ ನೀಡಬೇಕು.
11. ಸಂಸ್ಥೆಯವರು ತಮ್ಮ ಆದಾಯ ತೀರುವಳಿ ದೃಢೀಕರಣ ಪತ್ರವನ್ನು (ಅಂತಿಮವಾಗಿ ಸಲ್ಲಿಸಿರುವ) ಟೆಂಡರ್ ಜೊತೆಯಲ್ಲಿ ಸಲ್ಲಿಸುವುದು.
12. ಯಾವುದೇ ಕಾರಣ ನೀಡದೇ ಟೆಂಡರ್ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕೆಳಸಹಿದಾರರಿಗೆ ಕಾಯ್ದಿರಿಸಲಾಗಿದೆ.

11\. ಟೆಂಡರ್ ಅನುಮೋದಿತ ಸಂಸ್ಥೆಯು ಆದೇಶ ನೀಡಿದ 30 ದಿನಗಳಲ್ಲಿ ವಾರ್ಷಿಕ ನಿರ್ವಹಣೆಯನ್ನು ಕೈಗೊಂಡು ನಂತರ, ಕಾರ್ಯಕ್ಷಮತೆ ಹಾಗೂ ಗುಣಮಟ್ಟದ ಬಗ್ಗೆ ತೃಪ್ತಿಯಾದ ಮೇಲೆ ಮೂರುಕಂತುಗಳಲ್ಲಿ ಹಣ ಬಿಡುಗಡೆ ಮಾಡಲಾಗುವುದು.

12\. ಸರ್ಕಾರದ ನಿಯಮಾವಳಿಗಳ ಪ್ರಕಾರ ಸಂಬಂಧಿಸಿದ ತೆರಿಗೆಗಳನ್ನು ಮೂಲ ಬಿಲ್ಲಿನಲ್ಲಿಯೇ ಕಟಾವು ಮಾಡಲಾಗುವುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
ಪಿ.ಆರ್.1 ಅಂಗಾಂಶ ಕೃಷಿ.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಪಿ.ಒ. ಬಾಕ್ಸ್-7648, ಬೆಂಗಳೂರು-76**

**ಟೆಂಡರ್ ಪ್ರಕಟಣೆ**

**ಸಂ:ತೋಇ:ಜೀವತಾ: ಹಿಸತೋನಿ (ಅಂಕೃ):ಸತೋಅ3:24:2003-04, ದಿನಾಂಕ: 27ನೇ ಡಿಸೆಂಬರ್, 2003**

ಬಯೋಟೆಕ್ನಾಲಜಿ ಕೇಂದ್ರ ಹುಳಿಮಾವು, ಬೆಂಗಳೂರು-76 ಇಲ್ಲಿ ಸ್ಥಾಪಿಸಲಾಗಿರುವ ಡಿಎನ್ಎ ಫಿಂಗರ್ ಪ್ರಿಂಟಿಂಗ್ ಪ್ರಯೋಗಶಾಲೆಗೆ ಅಗತ್ಯವಿರುವ ಜೆಲ್ ಡ್ರೈಯರ್ (ಆಯಿಲ್ ಲೂಬ್ರಿಕೇಟೆಡ್ ವ್ಯಾಕ್ಯೂಂ ಪಂಪಿನೊಂದಿಗೆ) Gel drier with Oil lubricated vacuum pump) ಯಂತ್ರವನ್ನು ಸರಬರಾಜು ಮಾಡುವ ಬಗ್ಗೆ ವಿವಿಧ ಸಂಸ್ಥೆಗಳು, ಗುತ್ತಿಗೆದಾರರು ಹಾಗೂ ಸರಬರಾಜುದಾರರಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಸದರಿ ಪ್ರಯೋಗಶಾಲಾ ಯಂತ್ರೋಪಕರಣವನ್ನು ಸರಬರಾಜು ಮಾಡುವ ಬಗ್ಗೆ ತಗಲುವ ವೆಚ್ಚವನ್ನು ಪ್ರತ್ಯೇಕ ಟೆಂಡರುಗಳಲ್ಲಿ ನಮೂದಿಸಬೇಕು. ಟೆಂಡರ್ ಫಾರಂಗಳು, ನಿಬಂಧನೆಗಳು ಮತ್ತು ಇತರೆ

ಮಾಹಿತಿಗಳನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ದಿನಾಂಕ:17.01.2004 ರಿಂದ 24.01.04ರ ಒಳಗೆ ಪಡೆಯಬಹುದು.

ಟೆಂಡರ್ ಫಾರಂನ ಮೊತ್ತ ರೂ. 25/- ಮೊಹರಾದ ಟೆಂಡರುಗಳ ಮೇಲೆ ಪ್ರಯೋಗಶಾಲಾ ಯಂತ್ರೋಪಕರಣ ಸರಬರಾಜು ಮಾಡುವ ಬಗ್ಗೆ ಟೆಂಡರು ಎಂದು ನಮೂದಿಸಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರಿಗೆ ದಿನಾಂಕ:27.01.2004ರ 2.00 ಘಂಟೆಯ ಒಳಗೆ ಅಂಚೆ ಅಥವಾ ಮುದ್ದಾಂ ಕಳುಹಿಸುವುದು. ಟೆಂಡರುಗಳನ್ನು ಅದೇ ದಿನ ಸಂಜೆ 4.00 ಘಂಟೆಗೆ ತೆರೆಯಲಾಗುವುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
ಅಂಗಾಂಶ ಕೃಷಿ.

**ಟೆಂಡರ್ ನಿಯಮಾವಳಿಗಳು**

1. ಟೆಂಡರ್ ಫಾರಂ ಬೆಲೆ ರೂ. 25/- ಮಾತ್ರ. ಟೆಂಡರ್ ಫಾರಂನ್ನು ಈ ಕಛೇರಿಯಲ್ಲಿ ಹಣ ನೀಡಿ ಪಡೆಯಬಹುದು. ಟೆಂಡರ್ ಫಾರಂ ಹಣ ಹಿಂತಿರುಗಿಸಲಾಗುವುದಿಲ್ಲ.
2. ಟೆಂಡರ್ ಫಾರಂನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಮಾತ್ರ ಕೊಡಲಾಗುತ್ತದೆ. ವಿ.ಪಿ.ಪಿ. ಮುಖಾಂತರ ಕಳುಹಿಸಿಕೊಡಲಾಗುವುದಿಲ್ಲ.
3. ಟೆಂಡರ್ ಫಾರಂ ದಿನಾಂಕ:17.01.2004 ರಿಂದ 24.01.2004ರ ಸಂಜೆ 5.00ರ ವರೆಗೆ ಮಾತ್ರ ನೀಡಲಾಗುವುದು. ಮೊಹರು ಮಾಡಿದ ಟೆಂಡರನ್ನು ವಾಪಸ್ಸು ನೀಡಲು ಅಂತಿಮ ದಿನಾಂಕ:27.01.2004 ಮಧ್ಯಾಹ್ನ 2.00 ಗಂಟೆಯವರೆಗೆ ಮಾತ್ರ.
4. ಟೆಂಡರನ್ನು ದಿನಾಂಕ:27.01.2004ರಂದು ಸಂಜೆ 4.00 ಘಂಟೆಗೆ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು ಇಲ್ಲಿ ತೆರೆಯಲಾಗುವುದು.
5. ಸದರಿ ಟೆಂಡರಿನಲ್ಲಿ ಪ್ರಕಟಿಸಿರುವ ಪ್ರಯೋಗಶಾಲಾ ಯಂತ್ರೋಪಕರಣ (Gel drier with Oil lubricated vacuum pump) ಖರೀದಿ ಬಗ್ಗೆ ತಾಂತ್ರಿಕ ವಿವರಣೆಗಳನ್ನು ಹಾಗೂ ಸರಬರಾಜು ನಿಬಂಧನೆಗಳ ಪೂರ್ಣ ವಿವರಣೆಗಳನ್ನು ಸದರಿ ಕಛೇರಿಯಲ್ಲಿ ಪಡೆಯಬಹುದು.
6. ತೆರಿಗೆ ಮತ್ತು ಅಬ್ಕಾರಿ ಶುಲ್ಕವನ್ನು ಸ್ಪಷ್ಟವಾಗಿ ನಮೂದಿಸುವುದು. ಪ್ಯಾಕಿಂಗ್ ಚಾರ್ಜ್, ಸಾಗಾಣಿಕೆ ವೆಚ್ಚ, ವಿಮೆ ಎಲ್ಲವನ್ನು ಸೇರಿಸಿ ತಗಲುವ ಕನಿಷ್ಠ ದರವನ್ನು ನಮೂದಿಸುವುದು.
7. ಟೆಂಡರುದಾರರು ನಮೂದಿಸುವ ಯಂತ್ರೋಪಕರಣಕ್ಕೆ ತಗಲುವ ವೆಚ್ಚದ ಶೇ. 2% ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ ಡಿಡಿ ಮುಖಾಂತರ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಅಂಗಾಂಶ ಕೃಷಿ, ಬೆಂಗಳೂರು ರವರ ಹೆಸರಿನಲ್ಲಿ ಟೆಂಡರ್ ಅರ್ಜಿಯೊಂದಿಗೆ ಸಲ್ಲಿಸಬೇಕು.
8. ಟೆಂಡರ್ ಅನುಮೋದಿತ ಸಂಸ್ಥೆಯು ಶೇ. 5 ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಸದರಿ ಅಧಿಕಾರಿಯವರ ಹೆಸರಿನಲ್ಲಿ ಖರೀದಿ ಆದೇಶ/ಕಾರ್ಯಾದೇಶ ನೀಡುವ ಮುನ್ನ ನೀಡಬೇಕು.
9. ಸಂಸ್ಥೆಯವರು ತಮ್ಮ ಆದಾಯ ತೀರುವಳಿ ದೃಢೀಕರಣ ಪತ್ರವನ್ನು (ಅಂತಿಮವಾಗಿ ಸಲ್ಲಿಸಿರುವ) ಟೆಂಡರ್ ಜೊತೆಯಲ್ಲಿ ಸಲ್ಲಿಸುವುದು.
10. ಯಾವುದೇ ಕಾರಣ ನೀಡದೇ ಟೆಂಡರ್ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕೆಳಸಹಿದಾರರಿಗೆ ಕಾಯ್ದಿರಿಸಲಾಗಿದೆ.
11. ಸಾಮಗ್ರಿಗಳ ಪೂರೈಕೆಯನ್ನು ಆದೇಶ ನೀಡಿದ 30 ದಿನಗಳಲ್ಲಿ ಸರಬರಾಜು ಮಾಡಿದ ನಂತರ, ಕಾರ್ಯಕ್ಷಮತೆ ಹಾಗೂ ಗುಣಮಟ್ಟದ ಬಗ್ಗೆ ತೃಪ್ತಿಯಾದ ಮೇಲೆ ಹಣ ಬಿಡುಗಡೆ ಮಾಡಲಾಗುವುದು.
12. ಸರ್ಕಾರದ ನಿಯಮಾವಳಿಗಳ ಪ್ರಕಾರ ಮಾರಾಟ ತೆರಿಗೆ (5%) ಮತ್ತು ಆದಾಯ ತೆರಿಗೆ (2-3%) ಗಳನ್ನು ಮೂಲ ಬಿಲ್ಲಿನಲ್ಲಿಯೇ ಕಟಾವು ಮಾಡಲಾಗುವುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
ಪಿ.ಆರ್.2 ಅಂಗಾಂಶ ಕೃಷಿ.

**ಕಾರ್ಯದರ್ಶಿ ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು, ಕರ್ನಾಟಕ ಲೋಕ ಸೇವಾ ಆಯೋಗ ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ:ಇಪ(1) 3049/2003-04/ಪಿಎಸ್‌ಸಿ, ಬೆಂಗಳೂರು, ದಿನಾಂಕ:27ನೇ ಡಿಸೆಂಬರ್, 2003**

ದಿನಾಂಕ: 13.11.2003ರ ಕರ್ನಾಟಕ ರಾಜ್ಯಪತ್ರದ ಭಾಗ-5ರಲ್ಲಿ ಪ್ರಕಟಿಸಲಾಗಿರುವ 2003ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ "ಹಾವೇರಿ" ಕೇಂದ್ರದ ಶೀರ್ಷಿಕೆ ಕೆಳಗೆ "APPENDIX-A" ರ ಅಡಿಯಲ್ಲಿ "ಅಕೌಂಟ್ಸ್ ಹೈಯರ್" ವಿಷಯಕ್ಕೆ ಸಂಬಂಧಿಸಿದಂತೆ ಪ್ರಥಮ ದರ್ಜೆ ಅಡಿಯಲ್ಲಿ ನೋಂದಣಿ ಸಂಖ್ಯೆ:42222ರ ನಂತರ ನೋಂದಣಿ ಸಂಖ್ಯೆ:42610 ಅನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ,
ಪಿ.ಆರ್.4 ಬೆಂಗಳೂರು.

## ಚಿಕ್ಕ ನೀರಾವರಿ ಇಲಾಖೆ

## ಕಾರ್ಯನಿರ್ವಾಹಕ ಅಭಿಯಂತರು, ಚಿಕ್ಕ ನೀರಾವರಿ ವಿಭಾಗ, ಬೆಳಗಾಂವಿ

## ಟೆಂಡರ್ ಪ್ರಕಟಣೆ

**ನಂ.ಎಂಐಡಿ:ಟೆಂಡರ್: ಎ೫:2:03-04:3180, ದಿನಾಂಕ:4ನೇ ಡಿಸೆಂಬರ್, 2003**

ಈ ಕೆಳಕಂಡ ಕೆಲಸಗಳಿಗಾಗಿ ನೊಂದಾಯಿತ ಗುತ್ತಿಗೆದಾರರಿಂದ ಐಟಂ ದರಗಳಲ್ಲಿ ಆಧಾರದಮೇಲೆ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ದಿನಾಂಕ:19.01.04 ರಂದು ಭಾರತೀಯ ಕಾಲಮಾನ ಸಂಜೆ 4.00 ಗಂಟೆಯವರೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಸಾಧ್ಯವಾದಲ್ಲಿ ಅಂದೇ ಟೆಂಡರ್‌ಗಳನ್ನು ತೆರೆಯಲಾಗುವುದು.

ಸದರೀ ಕೆಲಸದ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ:05.01.04. ಕೆಲಸಗಳಿಗಾಗಿ ನಮೂದಿಸಿರುವ ಟೆಂಡರ್ ನಮೂನೆಯ ಬೆಲೆಯನ್ನು ಪಾವತಿ ಮಾಡಬೇಕು. ಈ ಹಣವನ್ನು ಹಿಂದಿರುಗಿಸಲಾಗುವುದಿಲ್ಲ. ಖಾಲಿ ಟೆಂಡರ್ ಫಾರಂಗಳನ್ನು ಸಂಬಂಧಪಟ್ಟ ನಕ್ಷೆಗಳು, ನಿರ್ದೇಶನಗಳು ಮಾಡಬೇಕಾಗಿರುವ ಕೆಲಸಗಳ ಪ್ರಮಾಣ ಶರತ್ತುಗಳೊಂದಿಗೆ ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ:16.01.04 ರಿಂದ 17.01.04 ರವರೆಗೆ ಪಡೆಯಬಹುದು. ಟೆಂಡರುದಾರರು ಹಾಲಿ ತಾವು ಮಾಡುತ್ತಿರುವ ಇಂತಹದೇ ಕೆಲಸಗಳ ಪಟ್ಟಿಯನ್ನು ಕಾರ್ಯಪ್ರಮಾಣ ತಿಳಿಯಲು ಅರ್ಜಿ ಜೊತೆಗೆ ಕೊಡಬೇಕೆಂದು ಕೋರಲಾಗಿದೆ ಮತ್ತು ಇಂತಹ ಕೆಲಸಗಳಲ್ಲಿ ಸಾಕಷ್ಟು ನೈಪುಣ್ಯತೆಯನ್ನು ಹೊಂದಿರತಕ್ಕದ್ದು.

ಗುತ್ತಿಗೆಗೆ ಸಂಬಂಧಿಸಿದ ಅಂದಾಜು ಪಟ್ಟಿ ನಕ್ಷೆಗಳನ್ನು ವಿವರಗಳನ್ನು ಕಛೇರಿಯ ವೇಳೆಯಲ್ಲಿ ನೋಡಬಹುದು. ಮೇಲೆ ನಮೂದಿಸಿರುವ ದಿನಾಂಕಗಳು ಸಾರ್ವತ್ರಿಕ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.

ಇತರ ಶರತ್ತುಗಳ ಟೆಂಡರ್ ನೋಟೀಸ್ ಫಾರಂ ನಂ. ಪಿಡಬ್ಲ್ಯೂಡಿ 65 ಮತ್ತು 66 ರಂತೆ ಮತ್ತು ಪಾರದರ್ಶಕ ನಿಯಮಗಳನ್ವಯ ಇರುತ್ತವೆ.

**ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಕಳಿಸಲಾಗುವುದಿಲ್ಲ.**

| ಅ. ನಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಇಡಗಂಟು ಅಂದಾಜು ಮೊತ್ತ ರೂ. | ಟೆಂಡರ್ ಫಾರಂ ಬೆಲೆ ರೂ. ತೆರಿಗೆ ಪ್ರತ್ಯೇಕ | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಬಿಟ್ಟು | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಬೆಳಗಾಂವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕಲ್ಲೊಳ್ಳಿ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ (ಹಿರೇಹಳ್ಳಕ್ಕೆ) | 27.98 | 28000.00 | 2800.00 | 12 ತಿಂಗಳು | ಪ್ರಥಮ ದರ್ಜೆ |

**ಸೂಚನೆ:**

1. ಯಾವ ಕಾರಣವನ್ನು ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರುಗಳನ್ನು ನಿರಾಕರಿಸುವ ಹಕ್ಕನ್ನು ಇಲಾಖೆ ಕಾದಿರಿಸಿಕೊಂಡಿದೆ.
2. ಮುಂಗಡ ಠೇವಣಿಯನ್ನು ಕಾರ್ಯನಿರ್ವಾಹಕ ಅಭಿಯಂತರು, ಚಿಕ್ಕ ನೀರಾವರಿ ವಿಭಾಗ, ಬೆಳಗಾಂವಿ ಇವರ ಹೆಸರಿನಲ್ಲಿ ನಿಗದಿ ಠೇವಣಿ ಮಾಡಿದ ರಸೀದಿಯನ್ನು ಅಥವಾ ಬ್ಯಾಂಕ್ ಗ್ಯಾರಂಟಿ ಕೆಲಸದ ಹೆಸರನ್ನು ನಮೂದಿಸಿ ಅಥವಾ ರಾಷ್ಟ್ರೀಯ ಉಳಿತಾಯ ಯೋಜನೆ ಸರ್ಟಿಫಿಕೇಟುಗಳನ್ನು ಈ ಕೆಳಗೆ ಸಹಿ ಮಾಡಿದವರಿಗೆ ಪಾವತಿಯಾಗುವಂತೆ ಪ್ಲೆಡ್ಜ್ ಮಾಡಿ ಕಳುಹಿಸುವುದು ಹಾಗೆ ಮಾಡಲು ತಪ್ಪಿದಲ್ಲಿ ಟೆಂಡರುಗಳನ್ನು ನೇರವಾಗಿ ನಿರಾಕರಿಸಲಾಗುವುದು.
3. ವ್ಯಾಲಿಡಿಟಿಯ ಪೀರೀಡ್ ತೊಂಬತ್ತು (90) ದಿವಸಗಳ ಅವಧಿಯನ್ನು ಒಳಗೊಂಡಿದ್ದು ಠೇವಣಿ ಕ್ರಮಬದ್ಧತೆಯು ಅದೇ ಅವಧಿಗೆ ಬೇಕಾಗುತ್ತದೆ.
4. ಗುತ್ತಿಗೆದಾರರು ಟೆಂಡರ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವಾಗ್ಗೆ, ರಿಜಿಸ್ಟ್ರೇಷನ್ ನಕಲನ್ನು ಮತ್ತು ಇತ್ಯಾದಿ ವಿವರಗಳನ್ನು ಸಲ್ಲಿಸಬೇಕು.
5. ಖಾಲೀ ಟೆಂಡರ್ ಫಾರಂಗಳನ್ನು ಪಡೆದ ಎಲ್ಲಾ ಗುತ್ತಿಗೆದಾರರು ಸರಿಯಾದ ಇ.ಎಂ.ಡಿ.ಯೊಂದಿಗೆ ಟೆಂಡರಿನಲ್ಲಿ ಕಡ್ಡಾಯವಾಗಿ ಭಾಗವಹಿಸಬೇಕು. ತಪ್ಪಿದರೆ ಅಂತಹ ಗುತ್ತಿಗೆದಾರರು ಮುಂದಿನ ಟೆಂಡರಿನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
6. ಖಾಲಿ ಟೆಂಡರ್ ಫಾರಂ ಪಡೆಯುವಾಗ ಗುತ್ತಿಗೆದಾರರು ನೋಂದಣಾಧಿಕಾರಿಗಳು, ನೀಡಿದ ಗುತ್ತಿಗೆದಾರರ ಪಾಸ್‌ಬುಕ್ಕನ್ನು ತಪ್ಪದೇ ಹಾಜರುಪಡಿಸಬೇಕು.
7. ಕಾಮಗಾರಿಯ ಬಿಲ್ಲುಗಳನ್ನು ಆ ಸಾಲಿನ ಅನುದಾನ ಹಾಗೂ ಹಣ ಭರವಸೆ ಪತ್ರದ ಲಭ್ಯತೆಯನ್ನು ಅನುಲಕ್ಷಿಸಿ ಹಣ ಬಟವಾಡೆ ಮಾಡಲಾಗುವುದು.
8. ಹಣ ಬಟವಾಡೆ ಮಾಡದ ಕಾರಣ ನೀಡಿ ಕೆಲಸವನ್ನು ಸ್ಥಗಿತಗೊಳಿಸತಕ್ಕದ್ದಲ್ಲ, ಹಾಗೂ ಈ ಕುರಿತು ಯಾವುದೇ ತಕರಾರು, ತಗಾದೆಗೆ ಪರಿಹಾರ ನೀಡಲಾಗುವುದಿಲ್ಲ.

ಕಾರ್ಯನಿರ್ವಾಹಕ ಇಂಜೀನಿಯರರು,
ಸಣ್ಣ ನೀರಾವರಿ ವಿಭಾಗ, ಬೆಳಗಾಂವಿ.

ಪಿ.ಆರ್.834

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವನ್ಯಜೀವಿ ವಿಭಾಗ, ಶಿವಮೊಗ್ಗ

### ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ನಂ.ಎಸಿಟಿ:ಆಆ:ಸಿಆರ್-16/2003-04, ದಿನಾಂಕ:15ನೇ ಡಿಸೆಂಬರ್, 2003**

ಶಿವಮೊಗ್ಗ ವನ್ಯಜೀವಿ ವಿಭಾಗಕ್ಕೆ ಒಳಪಡುವ ಸಕ್ರೆಬೈಲು ಇಲಾಖೆ ಆನೆ ಬಿಡಾರದಲ್ಲಿ ಪೋಷಿಸಲ್ಪಡುತ್ತಿರುವ ಇಲಾಖಾ ಆನೆಗಳಿಗೆ 2004-2005ನೇ ಸಾಲಿಗೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲ್ಪಟ್ಟಿರುವ ಅಂದಾಜು ಪ್ರಮಾಣದ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು, ಪ್ರತಿದಿನದ ಅಗತ್ಯಕ್ಕೆ ಅನುಗುಣವಾಗಿ ಒದಗಿಸುವ ಕೆಲಸಕ್ಕಾಗಿ ಈ ವಿಭಾಗದ ನೊಂದಾಯಿತ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ದಿನಾಂಕ:30.01.2004ರಂದು 3.00 ಘಂಟೆಯವರೆಗೆ ಸ್ವೀಕರಿಸಿ, ಸಾಧ್ಯವಾದರೆ ಅದೇ ದಿನ 4.00 ಘಂಟೆಯ ನಂತರ ತೆರೆಯಲಾಗುವುದು.

**ಅನುಸೂಚಿ**

**ಸಕ್ರೆಬೈಲು ಆನೆಗಳ ಕ್ಯಾಂಪಿನ ಆನೆಗಳಿಗೆ ಮೇವು ಆಹಾರ ಸರಬರಾಜು**

| ಕ್ರ. ಸಂ. | ಆಹಾರಪದಾರ್ಥದ ವಿವರ | ಅಂದಾಜು ಪ್ರಮಾಣ | ಒಟ್ಟು ಅಂದಾಜು ಮೊತ್ತ (ರೂಗಳು) | ಮುಂಗಡ ಠೇವಣಿ ಇ.ಎಂ.ಡಿ. (ರೂಗಳು) |
|---|---|---|---|---|
| 1. | ದಪ್ಪ ಭತ್ತ (ಜಯ ಅಥವಾ 1001 ತಳಿ) | 33264.00 ಕೆ.ಜಿ. | | |
| 2. | ಭತ್ತದ ಹುಲ್ಲು | 67440.00 ಕೆ.ಜಿ. | | |
| 3. | ಬಲಿತ ತೆಂಗಿನಕಾಯಿ (ಕನಿಷ್ಟ 500 ಗ್ರಾಂ ತೂಕ) | 5840 ಸಂಖ್ಯೆ | | |
| 4. | ದಪ್ಪ ಅಕ್ಕಿ (ಜಯ ಅಥವಾ 1001 ತಳಿ) | 25290.00 ಕೆ.ಜಿ. | 785000.00 | 39250.00 |
| 5. | ಬೆಲ್ಲ (ಉಂಡೆ) | 1825.00 ಕೆ.ಜಿ. | | |
| 6. | ಉಪ್ಪು, (ಹರಳು) | 1095.00 ಕೆ.ಜಿ. | | |
| 7. | ಕಬ್ಬು (ಬಲಿತದ್ದು) | 1000.00 ಕೆ.ಜಿ. | | |
| 8. | ಹರಳೆಣ್ಣೆ | 1460.00 ಲೀ. | | |

**ಷರತ್ತುಗಳು**

1. ಟೆಂಡರ್ ಫಾರಂಗಳನ್ನು ದಿನಾಂಕ:29.01.2004ರ ಬೆಳಿಗ್ಗೆ 10.00 ಗಂಟೆಯಿಂದ 30.01.2004ರ ಮಧ್ಯಾಹ್ನ 1.30 ಗಂಟೆಯವರೆಗೆ ಕಛೇರಿ ವೇಳೆಯಲ್ಲಿ ಅನುಸೂಚಿಯಲ್ಲಿ ತಿಳಿಸಿರುವ ಆಹಾರ ಸರಬರಾಜಿಗೆ ಟೆಂಡರ್ ಫಾರಂ ಶುಲ್ಕವನ್ನು 1000/- (ಒಂದು ಸಾವಿರ ರೂಪಾಯಿ ಮಾತ್ರ) (ಶಾಸನ ಬದ್ಧ ತೆರಿಗೆಗಳನ್ನು ಒಳಗೊಂಡ) ಈ ಕೆಳಗೆ ಸಹಿಮಾಡಿದ ಅಧಿಕಾರಿಗಳ ಹೆಸರಿನಲ್ಲಿ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ/ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಡಿ.ಡಿ. ಮೂಲಕ ಕಛೇರಿ ವೇಳೆಯಲ್ಲಿ ಪಾವತಿಸಿ (ಹಿಂತಿರುಗಿಸಲಾಗುವುದಿಲ್ಲ) ಟೆಂಡರ್ ಫಾರಂಗಳನ್ನು ಪಡೆಯಬಹುದಾಗಿದೆ.
2. ಪ್ರತಿಯೊಂದು ಘಟಕದ ಆಹಾರ ಸರಬರಾಜಿಗೆ ಪ್ರತ್ಯೇಕ ಟೆಂಡರ್ ಫಾರಂಗಳನ್ನು ನಿಗದಿತ ಇ.ಎಂ.ಡಿ. ಮತ್ತಿತರೆ ದಾಖಲೆಗಳೊಂದಿಗೆ ಹಾಕತಕ್ಕದ್ದು.
3. ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ನಿರಾಕರಿಸಲಾಗುವುದು. ಯಾವುದೇ ಕಾರಣ ನೀಡದೇ ಟೆಂಡರ್‌ನ್ನು ನಿರಾಕರಿಸುವ ಅಧಿಕಾರವನ್ನು ಈ ಕೆಳ ಸಹಿದಾರರು ಕಾಯ್ದಿರಿಸಿಕೊಂಡಿರುತ್ತಾರೆ.
4. ಟೆಂಡರ್ ನಿಗದಿಪಡಿಸಿದ ದಿನಾಂಕದಂದು ಯಾವುದೇ ರಜಾದಿನವಾಗಿದ್ದಲ್ಲಿ, ಆ ದಿನವನ್ನು ಮಾರನೆಯ ಕೆಲಸದ ದಿನ ಎಂದು ತಿಳಿಯತಕ್ಕದ್ದು.
5. ಇನ್ನೂ ಹೆಚ್ಚಿನ ವಿವರಗಳಿಗೆ ಈ ಕೆಳ ಸಹಿದಾರರ ಕಛೇರಿಯ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್.835

## ಕರ್ನಾಟಕ ಮೃಗಾಲಯ ಪ್ರಾಧಿಕಾರ

## ಕಾರ್ಯ ನಿರ್ವಾಹಕ ನಿರ್ದೇಶಕರು, ಹುಲಿ-ಸಿಂಹಧಾಮ, ತ್ಯಾವರೆಕೊಪ್ಪ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವನ್ಯಜೀವಿ ವಿಭಾಗ, ಶಿವಮೊಗ್ಗ

### ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ನಂ.ಎಸಿಟಿ:ಹುಸಿಧಾಆ:ಸಿಆರ್-14/2003-04, ದಿನಾಂಕ:15ನೇ ಡಿಸೆಂಬರ್, 2003**

ಶಿವಮೊಗ್ಗ ವನ್ಯಜೀವಿ ವಿಭಾಗ ವ್ಯಾಪ್ತಿಯ ಕರ್ನಾಟಕ ಮೃಗಾಲಯ ಪ್ರಾಧಿಕಾರಕ್ಕೆ ಒಳಪಡುವ ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದಲ್ಲಿ ಪೋಷಿಸಲ್ಪಡುತ್ತಿರುವ ಮಾಂಸಾಹಾರಿ ವನ್ಯಪ್ರಾಣಿ ಮತ್ತು ಸಸ್ಯಾಹಾರಿ ವನ್ಯಪ್ರಾಣಿ ಪಕ್ಷಿಗಳಿಗೆ 2004-2005ನೇ ಸಾಲಿಗೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲ್ಪಟ್ಟಿರುವ ಅಂದಾಜು ಪ್ರಮಾಣದ ಉತ್ತಮ ಗುಣಮಟ್ಟದ ಮಾಂಸಾಹಾರ ಮತ್ತು ಸಸ್ಯಾಹಾರ ಆಹಾರ

ಪದಾರ್ಥಗಳನ್ನು, ಪ್ರತಿದಿನದ ಅಗತ್ಯಕ್ಕೆ ಅನುಗುಣವಾಗಿ ಒದಗಿಸುವ ಕೆಲಸಕ್ಕಾಗಿ ಈ ವಿಭಾಗದ ನೊಂದಾಯಿತ ಗುತ್ತಿಗೆದಾರರಿಂದ ಟೆಂಡರುಗಳನ್ನು ದಿನಾಂಕ:30.01.2004 ರಂದು 3.00 ಘಂಟೆಯವರೆಗೆ ಸ್ವೀಕರಿಸಿ, ಸಾಧ್ಯವಾದರೆ ಅದೇ ದಿನ 4.00 ಘಂಟೆಯ ನಂತರ ತೆರೆಯಲಾಗುವುದು.

**ಅನುಸೂಚಿ**

**ಘಟಕ-1-ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದ ಪ್ರಾಣಿ, ಪಕ್ಷಿಗಳಿಗೆ ಆಹಾರ ಸರಬರಾಜು**

| ಕ್ರ. ಸಂ. | ಆಹಾರಪದಾರ್ಥದ ವಿವರ | ಅಂದಾಜು ಪ್ರಮಾಣ | ಒಟ್ಟು ಅಂದಾಜು ಮೊತ್ತ (ರೂಗಳಲ್ಲಿ) | ಮುಂಗಡ ಠೇವಣಿ ಇ.ಎಂ.ಡಿ. (ರೂಗಳಲ್ಲಿ) |
|---|---|---|---|---|
| 1. | ಸೂರ್ಯಕಾಂತಿ ಹಿಂಡಿ | 14929.00 ಕೆ.ಜಿ. | 633000.00 | 31650.00 |
| 2. | ಗೋಧಿ ಬೂಸ | 14929.00 ಕೆ.ಜಿ. | | |
| 3. | ಹುರಳಿನುಚ್ಚು | 14929.00 ಕೆ.ಜಿ. | | |
| 4. | ರಾಗಿ | 245.00 ಕೆ.ಜಿ. | | |
| 5. | ಹೈಬ್ರಿಡ್ ಜೋಳ | 245.00 ಕೆ.ಜಿ. | | |
| 6. | ದಪ್ಪ ಭತ್ತ, (ಜಯ ಅಥವಾ 1001 ತಳಿ) | 245.00 ಕೆ.ಜಿ. | | |
| 7. | ದಪ್ಪ ಅಕ್ಕಿ (ಜಯ ಅಥವಾ 1001 ತಳಿ) | 3165.00 ಕೆ.ಜಿ. | | |
| 8. | ಕಡ್ಲೆಕಾಳು | 183.00 ಕೆ.ಜಿ. | | |
| 9. | ಹೆಸರುಕಾಳು | 183.00 ಕೆ.ಜಿ. | | |
| 10. | ಹುರಿಗಡಲೆ | 183.00 ಕೆ.ಜಿ. | | |
| 11. | ತರಕಾರಿ, (ಕ್ಯಾರೆಟ್, ಬೀಟ್ ರೂಟ್, ಕ್ಯಾಬೇಜ್, ನವಿಲು ಕೋಸು ಮಿಶ್ರ) | 3650.00 ಕೆ.ಜಿ. | | |
| 12. | ನಂದಿನಿ ಹಾಲು | 2920 ಲೀಟರ್. | | |
| 13. | ಉಪ್ಪು, (ಹರಳು) | 354.00 ಕೆ.ಜಿ. | | |
| 14. | ಪಚ್ಚ ಬಾಳೆಹಣ್ಣು (ಕನಿಷ್ಟ 100 ಗ್ರಾಂ. ತೂಕಕ್ಕಿಂತ ಕಡಿಮೆ ಇಲ್ಲದ) | 6570 ಸಂಖ್ಯೆ. | | |
| 15. | ಹಸಿರು ಮೇವು | 215350.00 ಕೆ.ಜಿ. | | |

**ಘಟಕ-2**

**ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದ ಮಾಂಸಾಹಾರಿ ಪ್ರಾಣಿಗಳಿಗೆ ಆಹಾರ ಸರಬರಾಜು**

| ಕ್ರ. ಸಂ. | ಆಹಾರಪದಾರ್ಥದ ವಿವರ | ಅಂದಾಜು ಪ್ರಮಾಣ | ಒಟ್ಟು ಅಂದಾಜು ಮೊತ್ತ (ರೂಗಳಲ್ಲಿ) | ಮುಂಗಡ ಠೇವಣಿ ಇ.ಎಂ.ಡಿ. (ರೂಗಳಲ್ಲಿ) |
|---|---|---|---|---|
| 1. | ದನದ ಮಾಂಸ (ಮೂಳೆ ಸಹಿತ) | 93834 ಕೆ.ಜಿ. | 2745000.00 | 137250.00 |
| 2. | ದನದ ಮಾಂಸ (ಮೂಳೆ ರಹಿತ) | 780 ಕೆ.ಜಿ. | | |
| 3. | ಕೋಳಿ ಮಾಂಸ | 5850 ಕೆ.ಜಿ. | | |
| 4. | ಜೀವಂತ ಕೋಳಿ (ಪ್ರತಿ ಕೋಳಿ ಕನಿಷ್ಟ 1.50 ಕೆ.ಜಿ.) | 156 ಸಂಖ್ಯೆ | | |
| 5. | ಕೋಳಿಮೊಟ್ಟೆ. | 2000 ಸಂಖ್ಯೆ | | |

**ಷರತ್ತುಗಳು**

1. ಟೆಂಡರ್ ಫಾರಂಗಳನ್ನು ದಿನಾಂಕ:29.01.2004ರ ಬೆಳಿಗ್ಗೆ 10.00 ಗಂಟೆಯಿಂದ 30.01.2004ರ ಮಧ್ಯಾಹ್ನ 1.30 ಗಂಟೆಯವರೆಗೆ ಕಛೇರಿ ವೇಳೆಯಲ್ಲಿ ಅನುಸೂಚಿಯಲ್ಲಿ ತಿಳಿಸಿರುವ ವಿವಿಧ ಘಟಕಗಳ ಆಹಾರ ಸರಬರಾಜಿಗೆ ಟೆಂಡರ್ ಫಾರಂ ಶುಲ್ಕ 1000/-(ಒಂದು ಸಾವಿರ ರೂಪಾಯಿ ಮಾತ್ರ) (ಶಾಸನ ಬದ್ಧ ತೆರಿಗೆಗಳನ್ನು ಒಳಗೊಂಡ) ಈ ಕೆಳಗೆ ಸಹಿಮಾಡಿದ ಅಧಿಕಾರಿಗಳ ಹೆಸರಿನಲ್ಲಿ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ/ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಡಿ.ಡಿ. ಮೂಲಕ ಕಛೇರಿ ವೇಳೆಯಲ್ಲಿ ಪಾವತಿಸಿ (ಹಿಂತಿರುಗಿಸಲಾಗುವುದಿಲ್ಲ) ಟೆಂಡರ್ ಫಾರಂಗಳನ್ನು ಪಡೆಯಬಹುದಾಗಿದೆ.
2. ಪ್ರತಿಯೊಂದು ಘಟಕದ ಆಹಾರ ಸರಬರಾಜಿಗೆ ಪ್ರತ್ಯೇಕ ಟೆಂಡರ್ ಫಾರಂಗಳನ್ನು ನಿಗದಿತ ಇ.ಎಂ.ಡಿ. ಮತ್ತಿತರೆ ದಾಖಲೆಗಳೊಂದಿಗೆ ಹಾಕತಕ್ಕದ್ದು.
3. ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ನಿರಾಕರಿಸಲಾಗುವುದು. ಯಾವುದೇ ಕಾರಣ ನೀಡದೇ ಟೆಂಡರ್‌ನ್ನು ನಿರಾಕರಿಸುವ ಅಧಿಕಾರವನ್ನು ಈ ಕೆಳ ಸಹಿದಾರರು ಕಾಯ್ದಿರಿಸಿಕೊಂಡಿರುತ್ತಾರೆ.

4. ಟೆಂಡರ್ ನಿಗದಿಪಡಿಸಿದ ದಿನಾಂಕದಂದು ಯಾವುದೇ ರಜಾದಿನವಾಗಿದ್ದಲ್ಲಿ, ಆ ದಿನವನ್ನು ಮಾರನೆಯ ಕೆಲಸದ ದಿನ ಎಂದು ತಿಳಿಯತಕ್ಕದ್ದು.
5. ಇನ್ನೂ ಹೆಚ್ಚಿನ ವಿವರಗಳಿಗೆ ಈ ಕೆಳ ಸಹಿದಾರರ ಕಛೇರಿಯ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಕಾರ್ಯ ನಿರ್ವಾಹಕ ನಿರ್ದೇಶಕರು,
ಹುಲಿ-ಸಿಂಹಧಾಮ, ತ್ಯಾವರೆಕೊಪ್ಪ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್.836

**ಜವಳಿ ಅಭಿವೃದ್ಧಿ ಆಯುಕ್ತರವರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ನಂ.14:3ಎ, ರಾಷ್ಟ್ರೋತ್ಥಾನ ಪರಿಷತ್ ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು-560 001**

**ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಕೈಜಇ:ಆಡಳಿತ:ಸಿ2:ವಸ್ತು ವಿಲೇವಾರಿ:2003-04 ದಿನಾಂಕ:12ನೇ ಡಿಸೆಂಬರ್, 2003**

**ವಿಷಯ:** ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಕಛೇರಿಯಲ್ಲಿನ ಅನುಪಯುಕ್ತ ವಸ್ತುಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಜವಳಿ ಅಭಿವೃದ್ಧಿ ಆಯುಕ್ತರವರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, 14:3 ಎ, ರಾಷ್ಟ್ರೋತ್ಥಾನ ಪರಿಷತ್ ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು ಕಛೇರಿಗೆ ಸೇರಿದ ಈ ಕೆಳಕಂಡ ಅನುಪಯುಕ್ತ ವಸ್ತುಗಳನ್ನು ಹೇಗಿದೆಯೋ ಹಾಗೇ ಯಥಾಸ್ಥಿತಿಯಲ್ಲಿ ದಿನಾಂಕ: 07.02.2004ರಂದು ಬೆಳಿಗ್ಗೆ 11.00 ಗಂಟೆಗೆ ಮೇಲೆ ತಿಳಿಸಿದ ಕಛೇರಿಯ ಕಟ್ಟಡದ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಸವಾಲು ಮಾಡಬೇಕೆಂದು ಕೋರಲಾಗಿದೆ ಹಾಗೂ ಅನುಪಯುಕ್ತ ವಸ್ತುಗಳ ಪಟ್ಟಿಯನ್ನು 1 ರಿಂದ 11 ರವರೆಗೆ ತಿಳಿಸಲಾಗಿದೆ.

**ನಿಬಂಧನೆಗಳು ಮತ್ತು ಷರತ್ತುಗಳು**

1. ವಸ್ತುಗಳನ್ನು ಎಲ್ಲಿ ಹೇಗಿದೆಯೋ ಹಾಗೇ ಎಂಬ ನಿಬಂಧನೆ ಮೇರೆಗೆ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.
2. ವಸ್ತುಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಿ ಹರಾಜು ಹಾಕಲಾಗುವುದು. 1ನೇ ಗುಂಪು ಟೈರು ಮತ್ತು ಟ್ಯೂಬುಗಳು 2ನೇ ಗುಂಪು ರಿವಾಲ್ವಿಂಗ್ ಚೇರ್, ಡ್ಯೂಪ್ಲಿಕೇಟಿಂಗ್ ಮೆಷಿನ್, ಟ್ರೇಗಳು, ಎಸ್ ಟೈಪ್ ಚೇರುಗಳು, ಅಲ್ಮೆರಾ 6 ಅಡಿ, ಬೋರ್ಡ್‌ಗಳು, ರಿವಾಲ್‌ವಿಂಗ್ ಚೇರುಗಳು, ವುಡನ್ ಚೇರುಗಳು, ವುಡನ್ ಟೇಬಲ್, ವುಡನ್ ಸ್ಕ್ರೀನ್ ಮತ್ತು ಉದ್ದನೆಯ ಕುರ್ಚಿಗಳು.
3. ಹರಾಜಿನಲ್ಲಿ ಭಾಗವಹಿಸುವವರು ಹರಾಜಿನ ಮುಂಚೆ ರೂ. 500 ನಗದು ಠೇವಣಿಯನ್ನು ನೀಡಿ ಹರಾಜಿನಲ್ಲಿ ಭಾಗವಹಿಸುವ ಅಧಿಕಾರಿಗಳಿಗೆ ಸಲ್ಲಿಸಿ, ಹರಾಜಿನಲ್ಲಿ ಭಾಗವಹಿಸತಕ್ಕದ್ದು, ಠೇವಣಿ ನೀಡದೇ ಇರುವವರಿಗೆ ಹರಾಜಿನಲ್ಲಿ ಭಾಗವಹಿಸುವ ಹಕ್ಕು ಇರುವುದಿಲ್ಲ.
4. ಜಯಶೀಲರಾದ ಬಿಡ್ಡುದಾರರು ಬಿಡ್ ಮಾಡಿದ ಮೊಬಲಗನ್ನು ಸ್ಥಳದಲ್ಲಿಯೇ ಪಾವತಿಸಿ ವಸ್ತುಗಳನ್ನು ತಮ್ಮ ಸ್ವಂತ ಖರ್ಚಿನಿಂದ ಅದೇ ದಿನ ಸಾಗಿಸಿಕೊಳ್ಳಬೇಕು. ಬಿಡ್ಡುದಾರರು ಬಿಡ್‌ನ ಹಣವನ್ನು ಸ್ಥಳದಲ್ಲಿಯೇ ಪಾವತಿಸಬೇಕು. ತಪ್ಪಿದಲ್ಲಿ ಅಂತಹವರು ನೀಡಿರುವ ಠೇವಣಿ ಹಣವನ್ನು ಯಾವ ಮುನ್ಸೂಚನೆಯು ನೀಡದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
5. ಹರಾಜಿನಲ್ಲಿ ಜಯಶೀಲರಾದ ಬಿಡ್ಡ್‌ದಾರರ ಠೇವಣಿ ಹಣವನ್ನು ಹರಾಜು ಪ್ರಕ್ರಿಯೆ ಮುಗಿದ ನಂತರ ಮರುಪಾವತಿ ಮಾಡಲಾಗುವುದು.
6. ಚಾಲ್ತಿಯಲ್ಲಿರುವ ಮಾರಾಟ ತೆರಿಗೆ ಹಾಗೂ ಇನ್ನಿತರ ತೆರಿಗೆಗಳನ್ನು ನಿಯಮಾನುಸಾರ ಪ್ರತ್ಯೇಕವಾಗಿ ಪಾವತಿ ಮಾಡತಕ್ಕದ್ದು.
7. ಹರಾಜು ಪ್ರಕ್ರಿಯೆಯಲ್ಲಿ ಯಾವುದೇ ವಿವಾದ ಉಂಟಾದ ಪಕ್ಷದಲ್ಲಿ ಹರಾಜನ್ನು ರದ್ದುಗೊಳಿಸುವ ಅಥವಾ ಮುಂದೂಡುವ ಹರಾಜನ್ನು ಮಾಡದ ಎಲ್ಲಾ ಹಕ್ಕುಗಳನ್ನು ಹರಾಜು ನಡೆಸುವ ಅಧಿಕಾರಿಗಳು ಹೊಂದಿರುತ್ತಾರೆ.
8. ಎಲ್ಲಾ ವಿಷಯಗಳಲ್ಲಿ ಹರಾಜು ನಡೆಸುವ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ ಮತ್ತು ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಅವರ ತೀರ್ಮಾನಕ್ಕೆ ಬದ್ಧರಾಗಿರುತ್ತಾರೆ.
9. ವಸ್ತುಗಳ ಅಂದಾಜು ಮೌಲ್ಯಕ್ಕಿಂತ ಕಡಿಮೆ ಬರುವ ಮೌಲ್ಯವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹರಾಜು ನಡೆಸುವ ಅಧಿಕಾರಿ ಹೊಂದಿರುತ್ತಾರೆ.

**ವಸ್ತುವಿವರ**

| ಕ್ರ.ಸ. | ಸರಕುಗಳ ವಿವರ | ಸಂಖ್ಯೆ | ವಸ್ತುವಿನ ಸ್ಥಿತಿ |
|---|---|---|---|
| 1 | 2 | 3 | 4 |
| | ಒಂದನೇ ಗುಂಪು | | |
| 1. | ಅಂಬಾಸಿಡರ್ ಕಾರು, ಅರ್ಮೆಡಾ ಜೀಪು ಮತ್ತು ಟಾಟಾ ಸುಮೋ ಟೈರುಗಳು. | 16 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 2. | ಟ್ಯೂಬುಗಳು | 12 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |

| 1 | 2 | 3 | 4 |
|---|---|---|---|
| | ಎರಡನೆ ಗುಂಪು | | |
| 3. | ಉದ್ದನೆಯ ಕುರ್ಚಿ ಉದ್ದ 6 ಅಡಿ ಅಗಲ 1 ಅಡಿ | 3 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 4. | ಎಸ್ ಟೈಪ್ ಚೇರುಗಳು | 7 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ. |
| 5. | ಅಲ್ಮೆರಾ 6 ಅಡಿ | 1 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ. |
| 6. | ಬೋರ್ಡ್‌ಗಳು | 2 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ. |
| 7. | ರಿವಾಲ್ವಿಂಗ್ ಚೇರುಗಳು | 5 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ. |
| 8. | ವುಡನ್ ಚೇರುಗಳು | 7 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ. |
| 9. | ವುಡನ್ ಟೇಬಲ್ ಉದ್ದ 3 ಅಡಿ ಅಗಲ 2 ಅಡಿ | 1 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ. |
| 10. | ಡೂಪ್ಲಿಕೇಟಿಂಗ್ ಮೆಷಿನ್ | 1 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ. |
| 11. | ವುಡನ್ ಸ್ಕ್ರೀನ್ ಉದ್ದ 6 ಅಡಿ ಅಗಲ 3 ಅಡಿ | 1 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ. |
| 12. | ಟ್ರೇಗಳು | 7 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ. |

ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ
ನಿರ್ದೇಶಕರು, ಕೈಮಗ್ಗ ಮತ್ತು ಜವಳಿ.

ಪಿ.ಆರ್.837

**ಲೋಕೋಪಯೋಗಿ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಕಾರ್ಯಾಲಯ, ಲೋಕೋಪಯೋಗಿ ಇಲಾಖೆ, ಕಾರವಾರ ವಿಭಾಗ, ಕಾರವಾರ**

**ಟೆಂಡರ್ ಪ್ರಕಟಣೆ ಸಂಖ್ಯೆ:ಟೆಂಡರ್:9:2003-04:3079, ದಿನಾಂಕ: 10ನೇ ಡಿಸೆಂಬರ್, 2003**

**(ದ್ವಿಲಖೋಟೆ ಪದ್ಧತಿ)**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ನಮೂದಿಸಿದ ಕಾಮಗಾರಿಗಳನ್ನು ಕೈಗೊಳ್ಳಲು ನಿಗದಿತ ನಮೂನೆಯಲ್ಲಿ ಸೀಲು ಮಾಡಿದ ಎರಡು ಲಖೋಟೆಗಳಲ್ಲಿ ಐಟಂ ದರದ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ಕರ್ನಾಟಕ ಸರ್ಕಾರದ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಒಂದನೇ ದರ್ಜೆಯ ಗುತ್ತಿಗೆದಾರರಿಂದ ಮಾತ್ರ ಈ ಕೆಳಗೆ ಸಹಿ ಮಾಡಿದವರು ಪಿಡಬ್ಲ್ಯೂಜಿ-65 ಮತ್ತು ಪಿಡಬ್ಲ್ಯೂಜಿ-66ರಲ್ಲಿಯ ನಿಬಂಧನೆಗೆ ಒಳಪಟ್ಟು ಕರೆದಿರುತ್ತಾರೆ. ಭರ್ತಿ ಮಾಡಿದ ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರರವರ ಹಾಗೂ ಅಧೀಕ್ಷಕ ಇಂಜನೀಯರ್ ಲೋ.ಇ. ಧಾರವಾಡ ವೃತ್ತ, ಧಾರವಾಡರವರ ಕಛೇರಿಗಳಲ್ಲಿ ದಿನಾಂಕ:20.01.2004ರ ಸಾಯಂಕಾಲ 4.00 ಘಂಟೆಯವರೆಗೆ ಸ್ವೀಕರಿಸಲಾಗುವುದು ಹಾಗೂ ಸ್ವೀಕೃತವಾದ ಟೆಂಡರುಗಳ ಟೆಕ್ನಿಕಲ್ ಬಿಡ್‌ಗಳನ್ನು ಸಾಧ್ಯವಾದರೆ ದಿನಾಂಕ:21.01.2004ರಂದು ತೆರೆಯಲಾಗುವುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಮುಂಗಡ ಠೇವಣಿ (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ಕಾಲಾವಧಿ | ಖಾಲಿ ಟೆಂಡರು ಫಾರಂ ಬೆಲೆ ರೂ. ಗಳಲ್ಲಿ (ತೆರಿಗೆ ಸಹಿತ) | ಟೆಂಡರು ಫಾರಂಗಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ 5.30 ಘಂಟೆಯ ವರೆಗೆ | ಟೆಂಡರು ಫಾರಂ ನೀಡುವ ದಿನಾಂಕ | ಭರ್ತಿ ಮಾಡಿದ ಟೆಂಡರು ಸಲ್ಲಿಸುವ ಕೊನೆಯ ದಿನಾಂಕ (4.00 ಘಂಟೆಯ ವರೆಗೆ ಮಾತ್ರ) |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | **ಸೇತುವೆ ಕೆಲಸ** | | | | | | | |
| 1. | ನಬಾರ್ಡ್ ಆರ್.ಐ.ಡಿ.ಎಫ್-9 ಯೋಜನೆಯಡಿ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿನ ಮಾವಿನಕುರ್ವಾ ಹೊಸಾಡ ರಸ್ತೆಗೆ ಅಡ್ಡಲಾಗಿ ಸೇತುವೆ ನಿರ್ಮಾಣ. | 138.00 | 138000 | 15 ತಿಂಗಳುಗಳು (ಹದಿನೈದು ತಿಂಗಳುಗಳು) ಮಳೆಗಾಲ ಸಹಿತ | 5825/- | 12.01.04 ರಿಂದ 13.01.04 | 16.01.04 | 20.01.04 |
| | **ರಸ್ತೆ ಕೆಲಸ** | | | | | | | |
| 2. | ನಬಾರ್ಡ್ ಆರ್.ಐ.ಡಿ.ಎಫ್-9 ಯೋಜನೆಯಡಿ ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ತಾಲ್ಲೂಕಿನ ಬಾಚಣಕಿ ನ್ಯಾಸರಗಿ ಸನವಳ್ಳಿ, ಚಿಗಳ್ಳಿ, ಕಾತೂರು ರಸ್ತೆ ಸುಧಾರಣೆ | 105.50 | 106000 | 12 ತಿಂಗಳು ಗಳು (ಹನ್ನೆರಡು ತಿಂಗಳುಗಳು) ಮಳೆಗಾಲ ಸಹಿತ | 5825/- | 12.01.04 ರಿಂದ 13.01.04 | 16.01.04 | 20.01.04 |

ಪ್ರಕಟಣೆಯಲ್ಲಿ ಹೇಳಲಾದ ದಿನಾಂಕಗಳಲ್ಲಿ ಯಾವುದೇ ದಿನವು ರಜಾ ದಿನವೆಂದು ಘೋಷಿಸಿದಲ್ಲಿ ಮುಂದಿನ ಕಛೇರಿಯ ಕೆಲಸದ ದಿನವನ್ನು ಪರಿಗಣಿಸುವುದು. ಯಾವುದೇ ಗುತ್ತಿಗೆದಾರರ ಅರ್ಜಿಯನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಕಾರ್ಯನಿರ್ವಾಹಕ ಇಂಜನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರ ಇವರಿಗೆ ಇರುತ್ತದೆ.

**ಲಖೋಟೆ (1) (ಅರ್ಹತೆಯನ್ನು ನಿರ್ಧರಿಸುವ ಭಾಗ)**

ಈ ಲಖೋಟೆಯಲ್ಲಿ ಕೆಳಗಿನ ವಿವರಗಳನ್ನು ಮತ್ತು ಪ್ರಮಾಣ ಪತ್ರಗಳನ್ನು ಮಾತ್ರ ಸೇರಿಸಿ ಸೀಲ್ ಮಾಡಿ ಸಲ್ಲಿಸತಕ್ಕದ್ದು.

1. ದೃಢೀಕೃತ ಕರ್ನಾಟಕ ಸರ್ಕಾರದ ಒಂದನೇ ದರ್ಜೆಯ ಗುತ್ತಿಗೆದಾರರ ನೋಂದಣಿ ಪತ್ರ.
2. ಮೇಲಿನ ಕೆಲಸಗಳ ಟೆಂಡರು ಮೊತ್ತದ ಶೇಕಡಾ 30ರ ಮೊತ್ತಕ್ಕೆ ಕಡಿಮೆ ಇರದಂತೆ ಇದೇ ಮಾದರಿಯ ಸೇತುವೆಯ ಕಾಮಗಾರಿಗಳನ್ನು (ಸೇತುವೆಗಾಗಿ ಅರ್ಜಿ ಸಲ್ಲಿಸುವುದಾದರೆ) ಹಾಗೂ ಇದೇ ಮಾದರಿಯ ರಸ್ತೆ ಕಾಮಗಾರಿಗಳನ್ನು (ಅಂದರೆ ಖಡೀಕರಣ, ಮಿಕ್ಸ್ ಸೀಲ್ ಮಾದರಿಯ ಡಾಂಬರೀಕರಣ) (ರಸ್ತೆ ಕೆಲಸಕ್ಕಾಗಿ ಅರ್ಜಿ ಸಲ್ಲಿಸುವುದಾದರೆ) ಕಳೆದ 5 ಆರ್ಥಿಕ ವರ್ಷಗಳಲ್ಲಿನ ಯಾವುದಾದರೂ ಒಂದು ಆರ್ಥಿಕ ವರ್ಷದ ಅವಧಿಯಲ್ಲಿ ಯಶಸ್ವಿಯಾಗಿ ಮಾಡಿ ಮುಗಿಸಿದ ಬಗ್ಗೆ ಸಂಬಂಧಿಸಿದ ಕಾರ್ಯನಿರ್ವಾಹಕ ಇಂಜನೀಯರರಿಂದ ಅಥವಾ ತತ್ಸಮ ಅಧಿಕಾರಿಯವರಿಂದ ಪಡೆದ ಪ್ರಮಾಣ ಪತ್ರ ಅಥವಾ ಗುತ್ತಿಗೆದಾರರು ಶೇಕಡಾ 30 ರಷ್ಟು ಪ್ರಮಾಣದ ಮೇಲೆ ನಮೂದಿಸಿರುವ ಇದೇ ಮಾದರಿಯ ಕಾಮಗಾರಿ ನಿರ್ವಹಿಸುತ್ತಿರುವ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರ ಇರತಕ್ಕದ್ದು ಇಲ್ಲವಾದಲ್ಲಿ ಟೆಂಡರುಗಳು (ಟೆಕ್ನಿಕಲ್ ಬಿಡ್) ಅನರ್ಹಗೊಳ್ಳುತ್ತದೆ.
3. ಗುತ್ತಿಗೆದಾರರು ತಮ್ಮಲ್ಲಿ ಹೊಂದಿರುವ ಅಥವಾ ಲಭ್ಯವಿರುವ ಯಂತ್ರೋಪಕರಣಗಳ ವಿವರಗಳನ್ನು ನೀಡಬೇಕು. ಗುತ್ತಿಗೆದಾರರು ಸೇತುವೆ ಕಾಮಗಾರಿಗೆ ಅವಶ್ಯಕವಿರುವ ಸೆಂಟ್ರಿಂಗ್ ಸಾಮಾನುಗಳನ್ನು, ಕಾಂಕ್ರೀಟ್ ಮಿಕ್ಸರ್, ವೈಬ್ರೇಟರ್, ನೀರೆತ್ತುವ ಪಂಪುಗಳ ವಿವರಗಳನ್ನು ಹಾಗೂ ಅವುಗಳ ದಾಖಲಾತಿಗಳನ್ನು ತಪ್ಪದೇ ಸಲ್ಲಿಸಬೇಕು ಹಾಗೆಯೇ ರಸ್ತೆ ಕಾಮಗಾರಿಗೆ ಅವಶ್ಯವಿರುವ ರೋಡ್ ರೋಲರ್, ಹಾಟ್ ಮಿಕ್ಸ್ ಪ್ಲ್ಯಾಂಟ್, ಮೆಕ್ಯಾನಿಕಲ್ ಪೇವರ್, ನೀರೆತ್ತುವ ಪಂಪುಗಳು, ಕಾಂಕ್ರೀಟ್ ಮಿಕ್ಸರ್‌ಗಳ ವಿವರಗಳನ್ನು ಹಾಗೂ ಅವುಗಳ ದಾಖಲಾತಿಗಳನ್ನು ತಪ್ಪದೇ ಸಲ್ಲಿಸಬೇಕು. ದಾಖಲೆಗಳಿಲ್ಲದ ವಿವರಗಳನ್ನು ಪರಿಶೀಲಿಸಲಾಗುವುದಿಲ್ಲ.
4. ಗುತ್ತಿಗೆದಾರರು ಈಗಾಗಲೇ ವಹಿಸಿಕೊಂಡು ಮಾಡಿ ಮುಗಿಸಿದ ಅಥವಾ ಈಗ ಕೈಯಲ್ಲಿರುವ ಕಾಮಗಾರಿಗಳು ಮತ್ತು ಅವುಗಳ ಟೆಂಡರು ಮೊತ್ತದ ದೃಢೀಕೃತ ಪಟ್ಟಿ.
5. ಈ ಮೇಲಿನ ಆಯಾ ಕೆಲಸಗಳಿಗೆ ನಮೂದಿಸಿದ ಅವಶ್ಯವುಳ್ಳ ಇ.ಎಮ್.ಡಿ.ಯನ್ನು ಕಾರ್ಯನಿರ್ವಾಹಕ ಇಂಜನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಅಥವಾ ಸರಕಾರಿ ಖಜಾನೆಯ ಅಥವಾ ಉಪ-ಖಜಾನೆಯ ಚಲನ್/ ರಿಜರ್ವ್ ಬ್ಯಾಂಕಿನಿಂದ ಮಾನ್ಯತೆ ಪಡೆದ ಶೆಡ್ಯೂಲ್ ಬ್ಯಾಂಕಿನ ಇಲ್ಲವೇ ರಾಷ್ಟ್ರೀಕೃತ ಬ್ಯಾಂಕಿನಿಂದ ಕೊಡ ಮಾಡಿದ ನಿಗದಿತ ನಮೂನೆಯಲ್ಲಿನ ಬ್ಯಾಂಕ್ ಗ್ಯಾರಂಟಿ: ಕಾಲ್ ಡಿಪೋಜಿಟ್ ರಶೀದಿ ಅಥವಾ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು. ಇದನ್ನು ಬಿಟ್ಟು ಬಾಕಿ ಯಾವುದೇ ರೀತಿಯ ಇ.ಎಂ.ಡಿ. ಸಲ್ಲಿಸಿದ ಟೆಂಡರನ್ನು ತಿರಸ್ಕರಿಸಲಾಗುವುದು ಒಂದು ವೇಳೆ ಗುತ್ತಿಗೆದಾರರು ಸ್ಥಳೀಯ ಶೆಡ್ಯೂಲ್ ಬ್ಯಾಂಕ್‌ನಿಂದ ಇ.ಎಂ.ಡಿ. ಪಡೆದರೆ ಸದರಿ ಬ್ಯಾಂಕ್‌ಗಳು ಶೆಡ್ಯೂಲ್/ ರಾಷ್ಟ್ರೀಕೃತ ಬ್ಯಾಂಕ್ ಎಂದು ದೃಢೀಕರಣ ಪತ್ರವನ್ನು ಸಂಬಂಧಿಸಿದ ಬ್ಯಾಂಕಿನಿಂದ ಪಡೆದು ತಪ್ಪದೇ ಇ.ಎಂ.ಡಿ. ಸಂಗಡ ಲಗತ್ತಿಸಬೇಕು. (ಕಾರ್ಯನಿರ್ವಾಹಕ ಇಂಜನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿರಬೇಕು.)

**ಲಖೋಟೆ (2) (ಹಣಕಾಸಿನ ಸವಾಲು) (ಫೈನಾನ್ಸಿಯಲ್ ಬಿಡ್)**

ಈ ಲಖೋಟೆಯಲ್ಲಿ ಲೋ.ಇ. ಕಾರವಾರ ವಿಭಾಗ, ಕಾರವಾರ ಕಛೇರಿಯಿಂದ ಕೊಡಲಾದ ಟೆಂಡರು ಪುಸ್ತಕಗಳಲ್ಲಿ ಗುತ್ತಿಗೆದಾರರು ತಮ್ಮ ದರಗಳನ್ನು ನಮೂದಿಸಿ ಯಾವುದೇ ಬದಲಾವಣೆ ಮಾಡದೇ ದ್ವಿಪ್ರತಿಗಳಲ್ಲಿ ಟೆಂಡರು ಪುಸ್ತಕಗಳನ್ನು ಮಾತ್ರ ಸೀಲ್ ಮಾಡಿ ಸಲ್ಲಿಸತಕ್ಕದ್ದು.

ಲಖೋಟೆ (1) ಮತ್ತು ಲಖೋಟೆ (2) ಎಂದು ನಿಚ್ಚಳವಾಗಿ ಲಖೋಟೆಯ ಮೇಲೆ ಕೆಲಸದ ಹೆಸರಿನೊಂದಿಗೆ ಬರೆಯತಕ್ಕದ್ದು.

ಮೊದಲು ಲಖೋಟೆ (1)ನ್ನು ನಿರ್ಧಾರಿತ ದಿನದಂದು ತೆರೆದು ಗುತ್ತಿಗೆದಾರರ ಅರ್ಹತೆಯನ್ನು ನಿರ್ಧರಿಸಲಾಗುವುದು. ಅರ್ಹತೆಯುಳ್ಳ ಗುತ್ತಿಗೆದಾರರ ಲಖೋಟೆ (2)ನ್ನು ಮಾತ್ರ ಸಂಬಂಧಿಸಿದ ಗುತ್ತಿಗೆದಾರರಿಗೆ ತಿಳಿಸಿ ತೆರೆಯಲಾಗುವುದು.

**ನಿಬಂಧನೆಗಳು**

1. ಮೇಲಿನ ಕೆಲಸಗಳಿಗೆ ಅರ್ಜಿ ಸಲ್ಲಿಸುವ ವೇಳೆಯಲ್ಲಿ ಗುತ್ತಿಗೆದಾರರು ಮೇಲಿನ ಕೆಲಸಗಳ ಟೆಂಡರ್‌ಗಿಟ್ಟ ಮೊತ್ತದ ಶೇಕಡಾ 30ರ ಮೊತ್ತಕ್ಕೆ ಕಡಿಮೆ ಇರದಂತೆ ಇದೇ ಮಾದರಿಯ ಸೇತುವೆ ಹಾಗೂ ರಸ್ತೆ (ಅಂದರೆ ಖಡೀಕರಣ, ಮಿಕ್ಸ್ ಸೀಲ್ ಮಾದರಿಯ ಡಾಂಬರೀಕರಣ) ಕಾಮಗಾರಿಗಳನ್ನು ನಿರ್ವಹಿಸಿದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯ ಒಂದು ವರ್ಷದ ಅವಧಿಯಲ್ಲಿ ಯಶಸ್ವಿಯಾಗಿ ಮಾಡಿ ಮುಗಿಸಿದ ಬಗ್ಗೆ ಸಂಬಂಧಿಸಿದ ಕಾರ್ಯನಿರ್ವಾಹಕ ಇಂಜಿನೀಯರವರಿಂದ ಅಥವಾ ತತ್ಸಮ ಅಧಿಕಾರಿಯವರಿಂದ ಪಡೆದ ಪ್ರಮಾಣ ಪತ್ರ. ಒಂದು ವೇಳೆ ಪ್ರಮಾಣ ಪತ್ರದ ನಕಲು ಪ್ರತಿ ಲಗತ್ತಿಸಿದರೆ ಎಲ್ಲಾ ದಾಖಲಾತಿಗಳನ್ನು ಗೆಜೆಟೆಡ್ ಅಧಿಕಾರಿಗಳಿಂದ ಅಥವಾ ನೋಟರಿ ಪಬ್ಲಿಕರಿಂದ ದೃಢೀಕರಿಸಲ್ಪಟ್ಟಿರಬೇಕು ಇಲ್ಲವಾದಲ್ಲಿ ಯಾವುದೇ ಕಾರಣದಿಂದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.
2. ತಾಂತ್ರಿಕ ಬಿಡ್‌ನಲ್ಲಿ ಲಗತ್ತಿಸಿರುವ ದಾಖಲೆಗಳನ್ನು ನೋಟರಿಯವರಿಂದ ದೃಢೀಕರಿಸಿರಬೇಕು. ಮೂಲ ದಾಖಲೆಗಳನ್ನು ತಾಂತ್ರಿಕ ಬಿಡ್ಡನ್ನು ತೆರೆಯುವ ದಿನಾಂಕದಂದು ತಪ್ಪದೇ ಪರಿಶೀಲನೆಗಾಗಿ ಹಾಜರುಪಡಿಸಬೇಕು. ದೃಢೀಕರಿಸಲಾಗದ ಪ್ರಮಾಣ ಪತ್ರಗಳನ್ನು ಪರಿಶೀಲಿಸಲಾಗುವುದಿಲ್ಲ.

ಹೆಚ್ಚಿನ ಮಾಹಿತಿಗಳು ಬೇಕಾದಲ್ಲಿ ಕಾರ್ಯನಿರ್ವಾಹಕ ಇಂಜನೀಯರರು, ಲೋ.ಇ. ಕಾರವಾರ ವಿಭಾಗ, ಕಾರವಾರ ಇವರ ಕಛೇರಿಯನ್ನು ಕೆಲಸದ ದಿನಗಳಲ್ಲಿ ಸಂಪರ್ಕಿಸಿ ವಿವರಗಳನ್ನು ಪಡೆಯಬಹುದು.

**ಎ.ಎನ್. ಜಾನ್ವೇಕರ**
ಕಾರ್ಯನಿರ್ವಾಹಕ ಇಂಜಿನೀಯರರು,
ಲೋಕೋಪಯೋಗಿ ಇಲಾಖೆ ಕಾರವಾರ ವಿಭಾಗ, ಕಾರವಾರ.

ಪಿ.ಆರ್.838

